# ಬೆಳ್ಳೂರು ಒಂದು ಸಾಂಸ್ಕೃತಿಕ ಅಧ್ಯಯನ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಎಂ.ಫಿಲ್ (ಕನ್ನಡ) ಪದವಿಗಾಗಿ
ಸಾದರ ಪಡಿಸಿದ ಪ್ರಬಂಧ






ಸಂಶೋಧಕರು :
**ಕಾಂತಾರಾಜು ಜಿ.**
ಚಾಕೇನಹಳ್ಳಿ (ಗ್ರಾ. & ಅಂ)
ಬೆಳ್ಳೂರು ಹೋಬಳಿ
ನಾಗಮಂಗಲ ತಾಲ್ಲೂಕು
ಮಂಡ್ಯ ಜಿಲ್ಲೆ -೫೭೧೪೧೮

ಮಾರ್ಗದರ್ಶಕರು :
**ಡಾ॥ ಚಂದ್ರಪ್ಪ**
ಸಹ ಪ್ರಾಧ್ಯಾಪಕರು (ಕನ್ನಡ ವಿಭಾಗ)
ಆದಿಚುಂಚನಗಿರಿ ಪ್ರಥಮ ದರ್ಜೆ ಕಾಲೇಜು
ಚನ್ನರಾಯಪಟ್ಟಣ
ಹಾಸನ ಜಿಲ್ಲೆ



ಕರ್ನಾಟಕ ಸಂಘ (ರಿ.,)
**ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನ ಕೇಂದ್ರ ಮಂಡ್ಯ**
ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ
ಮಾನ್ಯತೆ ಪಡೆದಿದೆ

# ದೃಢೀಕರಣ ಪತ್ರ

ಬೇಲೂರು ಒಂದು ಸಾಂಸ್ಕೃತಿಕ ಅಧ್ಯಯನ ಎಂಬ ವಿಷಯದ ಮೇಲೆ ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್(ಕನ್ನಡ) ಪದವಿ ವಿದ್ಯಾರ್ಥಿಯಾದ ಜಿ.ಕಾಂತರಾಜುರವರು ನನ್ನ ಮಾರ್ಗದರ್ಶನ ಹಾಗೂ ಮೇಲ್ವಿಚಾರಣೆಯಲ್ಲಿ ಬರೆದು ಒಪ್ಪಿಸಿದ್ದಾರೆಂದೂ ಹಾಗೂ ಈ ವಿಷಯದ ಬಗ್ಗೆ ಬೇರೆ ಯಾರಿಗೂ ನಾನು ಮಾರ್ಗದರ್ಶನ ಮಾಡಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 28-6-12

ಸ್ಥಳ : ಚ.ರಾ.ಪಟ್ಟಣ

ಚಂದ್ರಪ್ಪ

ಡಾ॥ ಚಂದ್ರಪ್ಪ,

ಸಹಪ್ರಾಧ್ಯಾಪಕರು (ಕನ್ನಡ ವಿಭಾಗ)

ಆದಿಚುಂಚನಗಿರಿ ಪ್ರಥಮ ದರ್ಜೆ ಕಾಲೇಜು

ಚನ್ನರಾಯಪಟ್ಟಣ

ಹಾಸನ ಜಿ॥

# ಪ್ರಮಾಣ ಪತ್ರ

ಬೆಳ್ಳೂರು ಒಂದು ಸಾಂಸ್ಕೃತಿಕ ಅಧ್ಯಯನ ಎಂಬ ವಿಷಯದ ಮೇಲೆ ಈ ನಿಂಬಂಧವನ್ನು ಪ್ರೋ. ಡಾ॥ ಚಂದ್ರಪ್ಪರವರ ಮಾರ್ಗದರ್ಶನದಲ್ಲಿ ನನ್ನ ಸಂಶೋಧನೆಯ ಫಲವಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್(ಕನ್ನಡ) ವಿಭಾದವರಿಗೆ ಅರ್ಪಿಸುತ್ತಿದ್ದೇನೆ.

ಈ ನಿಂಬಂಧವನ್ನು ಹಿಂದಿನ ವರ್ಷಗಳಲ್ಲಿ ಯಾರು ಇಲ್ಲಿಯವರೆಗೆ ಯಾವುದೇ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲಿಲ್ಲವೆಂದು ನಾನು ಇಲ್ಲಿ ಪ್ರಮಾಣಿಕರಿಸುತ್ತೇನೆ.

ಜಿ.ಕಾಂತರಾಜು

ಸಂಶೋಧಾನ ವಿದ್ಯಾರ್ಥಿ

ನೋಂದಾಣಿ ಸಂಖ್ಯೆ KRSMKS-0559

ದಿನಾಂಕ : 29-6-12

ಸ್ಥಳ : ಹಂಪಿ.

# ಸಂಶೋಧಕರ ಮಾತು :

ಜೀವನ ಮಾರ್ಗಕ್ಕೆ ವಿದ್ಯೆ ಅವಕಾಶವೆನ್ನೊದಗಿಸಿದೆ ಇದರಿಂದಾಗಿ ನನ್ನ ಬದಕು ಮತ್ತು ಪರಿಸರಗಳನ್ನು ಕಂಡು ಕೊಳ್ಳುವ ಇರಾದೆಯಿಂದಾಗಿ ಹೆಚ್ಚಿನ ಓದಿಗೆ ತೊಡಗಿಸಿಕೊಳ್ಳುವ ಅವಕಾಶ ಒದಗಿಬಂತು. ಸಂಶೋಧನಾ .ವಿದ್ಯಾರ್ಥಿಯಾಗಿ ವಿಸ್ತಾರವಾದ ಸ್ಥಳೀಯವಾದ ಪ್ರಾದಶೀಕ ಬಗ್ಗೆಗಳನ್ನು ಕಂಡುಕೊಳ್ಳುವ ಹಂಬಲ ಮತ್ತು ಬಹು ಸಂಸ್ಕೃತಿ ವಿಚಾರಗಳು ಹೆಚ್ಚು ಚಾಲನೆಯನ್ನು ಪಡೆದುಕೊಳ್ಳುತ್ತಿರುವ ಸಂದರ್ಭದಲ್ಲಿ ಬೆಳ್ಳೂರು ಪರಿಸರ ಸಂಸ್ಕೃತಿಯನ್ನು ಕಾಣಬಯಸಿದೆ ಇದರಿಂದಾಗಿ ಒಂದು ನಿರ್ದಿಷ್ಟ ಪ್ರದೇಶದ ಸಂಸ್ಕೃತಿ ವಿವರಗಳನ್ನು ದಾಖಲಿಸುವ ಪ್ರಯತ್ನವಾಗಿ ಈ ಬರಹ ಮೂಡಿಬಂದಿದೆ

ಸಂಸ್ಕೃತಿಯ ವ್ಯಾಖ್ಯಾನಗಳು ಸಾಪೇಕ್ಷವಾದರೂ ಪರಂಪರೆ ಮತ್ತು ಸಮಕಾಲೀನ ಸಂದರ್ಭಗಳ ಸಾಮರಸ್ಯವನ್ನು ಕಾಣುತ್ತಲೇ ಬದಕು ಮತ್ತು ಭವಿಷ್ಯವನ್ನು ರೂಪಿಸುವ ಸಂಸ್ಕೃತಿಯ ಅವಿಷ್ಕಾರಳು ತೆರೆದುಕೊಳ್ಳುತ್ತಾ ಚಲನಶೀಲವಾಗಿರುತ್ತದೆ. ಈ ಪ್ರಯತ್ನದಲ್ಲಿ ಬೇರೆ-ಬೇರೆ ತೆರನಾಗಿ ಸಹಕರಿಸಿ ಬೆಂಬಲಿಸಿದವರು ಅನೇಕರಿದ್ದಾರೆ.

ಅಧ್ಯಾಪನಕ್ಕೆ ಸೀಮಿತಗೊಳಿಸಿಕೊಂಡಿದ್ದ ನನ್ನನ್ನು ಪ್ರೇರೆಣೆ ನೀಡಿ ಅಧ್ಯಯನದ ವಿಸ್ತರಣೆಗೆ ತೊಡಗಿಸಿದವರು ನನ್ನ ಮಾರ್ಗದರ್ಶಕರಾದ ಡಾ॥ ಚಂದ್ರುಕಾಳೇನಹಳ್ಳಿ ಇವರು ಅತ್ಯಂತ ಸಂಯಮ ಶೀಲತೆಯಿಂದ ನನ್ನ ಬೆಂಬಲಕ್ಕೆ ನಿಂತವರು.

ಇನ್ನು ವಿಷಯಕ್ಕೆ ಪೂರಕವಾದ ವಿಷಯ ಸಂಗ್ರಹಣೆ ಗ್ರಂಥ ಸಹಾಯ ಕ್ಷೇತ್ರಕಾರ್ಯ ಮೊದಲಾದ ವಿಚಾರಗಳಲ್ಲಿ ನನಗೆ ನೇರವಾದರು.

ಮಾನವ ಎಲ್ಲಿಂದಲಾದರೂ ಯಾರಿಂದಲಾದರೂ ವಿಷಯ ತಿಳಿದು ಸರ್ವಜ್ಞನಾಗಬೇಕೆಂದು ಆಸೆ. ಆದರೆ ನಾನು ಸರ್ವಜ್ಞನಾಗದಿದ್ದರೂ ಹೆಚ್ಚಿನ ವಿಷಯವನ್ನು ತಿಳಿಯಬೇಕೆಂದು ಹೊರಟೆನು ಆದರೆ ನಾನು ಅಳುಕಿನಿಂದಲೇ ಎಂ.ಫಿಲ್. ಮಾಡ ಹೊರಟಾಗ ಮನಸ್ಸು ಹಿಂಜರಿಯಿತು ಆಗ ನನಗೆ ಧೈಯ ತುಂಬಿದವರು ಮಂಡ್ಯದ ಕರ್ನಾಟಕ ಸಂಘದ ಅಧ್ಯಕ್ಷರಾದ ಡಾ॥ ಜಯಪ್ರಕಾಶ್‌ಗೌಡರು(ಜೆ.ಪಿ.) ಹಾಗೂ ಡಾ॥ ರಾ.ಗೌ. ಡಾ॥ ಬೋರೇಗೌಡ ಚಿಕ್ಕಮರಳಿ ಮತ್ತು ಡಾ॥ ಮ ರಾಮಕೃಷ್ಣರವರು ಇವರ ಸಲಹೆಯಂತೆ ಈ ಪ್ರಬಂಧ ಮಂಡಿಸುತ್ತಿದ್ದೇನೆ.

# ಪರಿವಿಡಿ

# ಸಂಸ್ಕೃತಿಯ ಸ್ವರೂಪ ಉದ್ದೇಶ ವ್ಯಾಪ್ತಿ ಮತ್ತು ಆದರ ವಿವಿಧ ಪರಿಕಲ್ಪನೆಗಳು

ಸಂಸ್ಕೃತಿ ಎಂಬುದಕ್ಕೆ ಸರ್ವಸಮ್ಮತವಾದ ಒಂದು ವ್ಯಾಖ್ಯಾನವನ್ನು ಕೊಟ್ಟು ಅರ್ಥೈಸಲು ಸಾಧ್ಯವಿಲ್ಲವೆಂಬುದು ಕೆಲವು ಅಭಿಪ್ರಾಯಗಳಿಂದ ವ್ಯಕ್ತವಾಗಿದೆ. "ಸಂಸ್ಕೃತ ಎಂದರೆ ಸಂಸ್ಕರಣಕ್ಕೆ ಸಂಬಂಧಪಟ್ಟಿದ್ದು ಸಂಸ್ಕರಣ, ಸಂಸ್ಕೃತ, ಸಂಸ್ಕೃತಿ ಇವು ಒಂದೇ ಮೂಲದಿಂದ ಹುಟ್ಟಿದ್ದ ಶಬ್ದಗಳು ಸಂಸ್ಕೃತಿ ಎಂಬುದರ ಮೂಲಾರ್ಥ ಲ್ಯಾಟಿನ್ ಬಾಷೆಯಲ್ಲಿ Culture ಎಂಬುದರಿಂದ ಬಂದಿದೆ ಲ್ಯಾಟಿನ್ ಮೂಲದಿಂದ ಜರ್ಮನ್ ಬಾಷೆಯಲ್ಲಿ ಕಲ್ಚರ್ () ಎಂಬ ರೂಪವನ್ನು ಪಡೆಯಿತು. ಇಂಗೀಷ್ ಬಾಷೆಯಲ್ಲೂ ಸಹ Culture ಎಂದು ಬಳಕೆಯಾಗಿದ್ದು ಇದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಸಂಸ್ಕೃತಿ ಎಂಬ ಶಬ್ದ ರೂಡಿಯಲ್ಲಿದೆ" ೧

"ಸಂಸ್ಕೃತಿ ಎಂದರೆ ಶುದ್ದೀಕರಿಸುವ, ಸಂಸ್ಕಾರಗೊಳಿಸಿದ, ನಯಗೊಳಿಸಿದ, ಸಜ್ಜುಗೊಳಿಸಿದ, ಬೇಯಿಸಿದ, ಅಲಂಕಾರಮಾಡಿದ, ಪವಿತ್ರಗೊಳಿಸಿದ, ಪರಿಶುದ್ದಗೊಳಿಸಿದ, ಅತ್ಯುತ್ತಮವಾದ, ಶೇಷ್ಠವಾದ ಮುಂತಾದ ಅರ್ಥಗಳನ್ನು ಹೊಂದಿದೆ" ೨

ಸಂಸ್ಕೃತಿಕ ಹಬ್ಬಕ್ಕೆ ಒಂದು ದೇಶದ ಅಥವಾ ಜನಾಂಗದ ಮಾನಸಿಕ ಸಾಧನೆ, ನಾಗರಿಕತೆ ಎಂಬ ಅರ್ಥವನ್ನು ನಿಘಂಟುಗಳು (ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು, ಸಂಪುಟ ೮–೧೯೫೫ ನೀಡಿವೆ. ಆದರೆ ಇವು ನಂತರದ ಕಾಲಘಟ್ಟದಲ್ಲಿ ಕೊಡಮಾಡಿದ ಅರ್ಥಗಳೇ ಹೊರತು, ಸಂಸ್ಕೃತಿ ಎಂಬ ಶಬ್ದದ ಮೂಲದಿಂದಲೇ ಬಂದಂತಹವಲ್ಲ. ಇದಕ್ಕೆ ಸಾಕ್ಷಿ ಎಂದರೆ ಕಿಟೇಲರು ತಮ್ಮ ಕನ್ನಡ–ಕನ್ನಡ–ಇಂಗ್ಲೀಷ್ ನಿಘಂಟು ಪ್ರಕಟಿಸುವಾಗ (೧೮೯೪) ಸಂಸ್ಕೃತಿಗೆ ಈ ಯಾವ ಅರ್ಥಗಳನ್ನು ಕೊಡುವುದಿಲ್ಲ ಸಂಸ್ಕೃತಿಗೆ ಸಂಸ್ಕಾರ ಎಂದೆಷ್ಟೆ ಅರ್ಥ ಹೇಳುತ್ತಾರೆ.

ಡಿ.ವಿ.ಜಿ. ಮಾಸ್ತಿ, ದೇವುಡು, ಮೊದಲಾದ ನವೂದಯ ಕಾಲದ ರಾಷ್ಟ್ರೀಯವಾದಿ ಲೇಖಕರು, ಕೆಲಮಟ್ಟಿಗೆ ಕುವೆಂಪು ಕೂಡ ನಿರ್ದಿಷ್ಟ ಸಮುದಾಯದ ಜೀವನ ವಿಧಾನದಿಂದ ಆಯ್ದು ತೆಗೆದ ಉದಾಹರಣೆಗಳಿಂದ ಸಂಸ್ಕೃತಿ ವ್ಯಾಖ್ಯೆಯನ್ನು ರೂಪಿಸಿದರು. ಅವರು ಸಂಸ್ಕೃತಿಗೆ ಕೊಟ್ಟ ವ್ಯಾಖ್ಯೆಗಳು ಶುದ್ದೀಕರಣವಾದಿ ಅರ್ಥವನ್ನು ಒಳಗೊಂಡಿವೆ.

ಜಾಗತೀಕರಣದ ಬಿರುಸಿನ ಈ ಹೊತ್ತಿನಲ್ಲಿ ಪರಕೀಯ ಸಂಸ್ಕೃತಿ ನಮ್ಮ ಮೇಲೆ ದಾಳಿ ಮಾಡುತ್ತಿದೆ. ಇದರ ಜೊತೆಗೆ ನಮ್ಮ ಮೇಲೆ ದಾಳಿ ಮಾಡುತ್ತಿದೆ. ಇದರ ಜೊತೆಗೆ ನಮ್ಮ ಸಂಸ್ಕೃತಿಯೂ ಪ್ರಭಾವ ಬೀರುತ್ತಿದೆ. ಹಿಂದೂ ಸಂಸ್ಕೃತಿ, ಇಸ್ಲಾಂ ಸಂಸ್ಕೃತಿ, ಕ್ರಿಶ್ಚಿಯನ್ ಸಂಸ್ಕೃತಿ, ಜೈನ್ ಸಂಸ್ಕೃತಿ, ಕನ್ನಡ ಸಂಸ್ಕೃತಿ, ತಮಿಳು ಸಂಸ್ಕೃತಿ, ಹಿಂದಿ ಸಂಸ್ಕೃತಿ ಮುಂತಾದ ಹೊಸ ಹೊಸ ಪರಿಕಲ್ಪನೆಗಳು ಜಾರಿಯಲ್ಲಿವೆ.

ಕಲ್ಚರ್ ಎಂಬ ಪದಕ್ಕೆ ಕೃಷಿ ಎಂದು ಅರ್ಥೈಸಲಾಗಿದೆ. ಕೃಷಿಯು ಪ್ರಾಚೀನ ಜನದಲ್ಲಿ ಕಲೆಯಾಗಿ ರೂಡಿಯಲ್ಲಿತ್ತು. ಮೊದಲು ಮಾನವ ಕೃಷಿಯನ್ನು ಕಲಿತ ನಂತರ ಇತರ ಜ್ಞಾನಶಾಖೆಗಳು ಅಲ್ಲಿ ಸೇರಿದವು ಎಂದು ಕಾಣಿಸುತ್ತದೆ. ಶಿಕ್ಷಣವು ಕೃಷಿ ಶಿಕ್ಷಣದಿಂದಲೇ ಆರಂಭವಾಗಿರಬೇಕು. ಏಕೆಂದರೆ Culture begins with arriculature ಎಂಬ ಮಾತೊಂದಿದೆ.

ಅದರಂತೆ ಮೊದಲಿಗೆ ಕೃಷಿಯಿಂದ ಸಂತೃಪ್ತನಾದ ಮಾನವನು ಮಾನಸಿಕ ಕೃಷಿಯನ್ನು ಆರಂಭಿಸಿದಾಗಿನಿಂದ ಈ ಸಂಸ್ಕೃತಿಯ ಅಸ್ಥಿತ್ವ ಆರಂಭವಾಯಿತು " ಮಾನವನ ಕಾರ್ಯ ಪ್ರಪಂಚದಲ್ಲಿ ಆತನ ಮನೋವಿಕಾಸದ ಸ್ಥಿತಿಯು ಪದೇ ಪದೇ ತೋರಿಬರುತ್ತದೆ. ಹಾಗೆ ತೋರಿ ಬರುವ ಮನೋವಿಕಾಸವನ್ನೇ ನಾವು ಸಂಸ್ಕೃತಿ ಎನ್ನುವುದು"[೩] ಮನಷ್ಯನು ಸಂಸ್ಕೃತಿಯನ್ನು ಆರ್ಥೈಸಿಕೊಂಡಂದಿನಿಂದ ಎಲ್ಲಾ ಜೀವರಾಶಿಗಳಿಗಿಂತ ಉನ್ನತ ಸ್ಥಾನದಲ್ಲಿದ್ದಾನೆ ಇರುವೆ ಜೇನುಹುಳುಗಳಲ್ಲಿ ಸಮಾಜ ವ್ಯೆವಸ್ಥೆಯನ್ನಲ್ಲ ಆದುದರಿಂದ ಮನುಷ್ಯನನ್ನು ಬಿಟ್ಟರೆ ಉಳಿದ ಪ್ರಾಣಿಗಳಲ್ಲಿ ಸಂಸ್ಕೃತಿ ವ್ಯವಸ್ಥೆಯನ್ನು ಗುರುತಿಳಿಸುವುದು ಸಾಧ್ಯವಾಗಿಲ್ಲ.

ಎಂದು ಎ.ಎಲ್.ಕಾರೋಬೆಲ್ ಹೆಳಿಕೆ ಜಿ.ಶಂ.ಪ ಹೇಳಿರುವಂತೆ " ಆದಿಮಾನವನ ಬದುಕನ್ನು ದೃಷ್ಠಯಲ್ಲಿಟ್ಟುಕೊಂಡು ಪರೀಶಿಲಿಸಿದಾಗ ಅವನ ಸಾದನೆಗಳೆಲ್ಲವೂ ಸಂಸ್ಕೃತಿ ಎಂಬ ಪದದ ವ್ಯಾಪ್ತಿಗೆ ಅಳವಡುತ್ತದೆ ತನ್ನು ವಿಕಾಸದ ಹಾದಿಯಲ್ಲಿ ನಡೆಯುವಾಗ ಕ್ರಮಕ್ರಮವಾಗಿ ತನ್ನ ಬದುಕಿಗೆ ಅವಶ್ಯಕ ಎನ್ನಿಸುವ ಹೊಸ ಹೊಸ ವಸ್ತುಗಳನ್ನು ಶೋಧಿಸಿಕೊಳ್ಳುತ್ತಾ ನಡೆದ ಅವನಿಗೆ ಭಾಷೆಗೂ ಮೊದಲು ಚಿತ್ರಸಂಕೇತಗಳು" ೫ ಅವನ ವ್ಯವಹಾರಿಕ ಜೀವನದ ಭಾಷೆಯಗಿರಬೇಕು ಅನಂತರ ಶಬ್ದಗಳ ಮೂಲಕ ಭಾಷೆ ರೂಪಿತವಾಗಿರಬೇಕು ಅನಂತರ ಶಬ್ದಗಳ ಮೂಲಕ ಭಾಷೆ ರೂಪಿತವಾಗಿರಬೇಕು ಮನುಷ್ಯನಿಗೆ ಅನುವಂಶಿಯವಾದ ಕೇಲವು ಗುಣಗಳಲ್ಲದೆ ಪರಿಸರದಿಂದ ಅಥೈಸಿಕೊಂಡು ಕೇಲವು ಗುಣಗಳಿರುತ್ತವೆ " ಭಾಷೆ ಮನೆಕಟ್ಟುವುದು ವಸ್ತುಗಳ ಉಪಯೋಗ ವ್ಯವಸಾಯ ಸಂಪ್ರದಾಯಗಳು ಇತ್ಯಾದಿಗಳು ಇವು ಹುಟ್ಟಿನೊಡನೆ ವ್ಯಕ್ತಿಯಿಂದ ವ್ಯಕ್ತಿಗೆ ಹರಿಯುವುದಿಲ್ಲ.

ಮನೆ ಕಟ್ಟುವುದನ್ನೇ ತೆಗೆದುಕೊಂಡರೆ ಪಕ್ಷಿಗಳಿಗೆ ಹುಟ್ಟಿನೊಡನೆ ಸ್ವಭಾವಸಿದ್ದವಾಗಿ ಬರುತ್ತದೆ. ಒಂದು ಸಾವಿರ ವರ್ಷದ ಹಿಂದೆ ಪಕ್ಷಿಗಳು ಹೆಗೆ ಗೂಡುಕಟ್ಟುತ್ತಿದ್ದವೋ ಹಾಗೆ ಈಗಲೂ ಗೂಡು ಕಟ್ಟುತ್ತವೆ. ಮನುಷ್ಯನಲ್ಲಾದರೋ ಅವನು ತನ್ನ ಪರಿಸರದಿಂದ ಅದನ್ನು ಕಲಿತುಕೊಳ್ಳುತ್ತಾನೆ ಉತ್ತಮ ಗೊಳಿಸಿಕೊಳ್ಳುತ್ತಾ ಹೋಗುತ್ತಾನೆ ಹೀಗೆ. ಹುಟ್ಟಿನಿಂದ ಬಾರದೆ ಮನುಷ್ಯ ತನ್ನ ಪರಿಸರದಿಂದ ಕಲಿತು ಕೊಳ್ಳುವ ಭಾಷೆ, ಉಪಕರಣಗಳ ತಯಾರಿಕೆ, ಕೈಗಾರಿಕೆ, ಕಲೆ, ವಿಜ್ಞಾನ, ಕಾನೂನು ಆಡಳಿತ ನೀತಿ ಮತ್ತು ಧರ್ಮ ಇತ್ಯಾದಿಗಳಲ್ಲವನ್ನು ಒಳಗೊಳ್ಳುತ್ತದೆ. ಸಂಸ್ಕೃತಿ "ಸಂಸ್ಕೃತಿಯ ಸ್ಪಷ್ಟವಾದ ಪರಿಕಲ್ಪನೆ ನೀಡಿರುವ ಇ.ಬಿ.ಟೆಲರ್ ಹೇಳುತ್ತಾನೆ "Culture or civilization is that complex whole which includes knowledge belief art morals laws customs and any other capbalities and habits acquired by man as a member of society"[೬] ಎಂದಿದ್ದಾರೆ

" ವಿಶಿಷ್ಠ ಸಮಾಜವೊಂದರ ಸದಸ್ಯರು ಪಾಲುಗೊಂಡು ವಂಶಪಾರಂಪರ್ಯವಾಗಿ ಸಾಗಿಸಲುವ ಜ್ಞಾನ ಮನೋಭಾವಗಳು ಮತ್ತು ರೂಡಿಯಾದ ವರ್ತನೂರುಪಿಕೆಗಳ ಒಟ್ಟು ಮೊತ್ತವೇ ಸಂಸ್ಕೃತಿ"[೭] ಎಂಬುದಾಗಿ ರಾಲ್ಫ್‌ಲಿಂಟನ್ ಹೇಳಿದ್ದಾನೆ. ಲೂವಿಸ್ ಎಂಬ ವಿದ್ವಾಂಸ ಸಾಮಾಜಿಕ ಸಂಪ್ರದಾಯದ ಒಟ್ಟು ಮೊತ್ತವೇ ಸಂಸ್ಕೃತಿ ಎಂದು ಹೇಳಿದ್ದಾರೆ.

ಸಂಸ್ಕೃತಿ ಎಂಬುದಕ್ಕೆ ತಕ್ಷಣದ ಉತ್ತರವೆಂದರೆ ಸಂಸ್ಕೃತಿ ಎನ್ನುವಂತಹ ಒಂದು ಸಂಗತಿ ಮೂರ್ತವಾಗಿ ಖಚಿತವಾಗಿ ವಾಸ್ತವಿದಲ್ಲಿ ಇಲ್ಲ. ಅದೊಮದು ಬೌದಿಕ ರಚನೆ ಆದ್ದುದರಿಂದ ನಮ್ಮ ಸಂಸ್ಕೃತಿಯನ್ನು ರಕ್ಷಿಸಬೇಕು ಅದಕೊಸ್ಕರ ನಮ್ಮ ಸರಕಾರ ಆರಣ್ಯ, ಕಂದಾಯ, ಆರೋಗ್ಯ ಇತ್ಯಾದಿ ಇಲಾಖೆಗಳು ಇರುವಂತೆ ಸಂಸ್ಕೃತಿ ಇಲಾಖೆಯೂ ಇದೆ. ಅದಕ್ಕೆ ಒಬ್ಬ ಸ್ವತಂತ್ರ ಮಂತ್ರಿಯೂ ಇದ್ದಾರೆ ಇದರ ಅಡಿಯಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಎಂಬ ಪ್ರತ್ಯೇಕ ಸಂಸ್ಥೆಯೂ ಇದೆ.

ಟಿ.ಎಸ್.ಎಲಿಯಬ್ ಹೇಳುವಂತೆ " ಸಂಸ್ಕೃತಿ ಎಂಬುದು ಒಂದು ಜನಾಂಗದ ಅಥವಾ ಒಂದು ಸಮಾಜದ ಸಮಸ್ತ ಕ್ರಿಯೆಗಳನ್ನು, ಅಭಿರುಚಿಗಳನ್ನು ಒಳಗೊಳ್ಳುತ್ತದೆ. ವ್ಯಕ್ತಿಗಳು ಏನಿದ್ದರೂ ಈ ಸಂಸ್ಕೃತಿಯನ್ನು ಮುಂದಿನ ಜನಾಂಗಕ್ಕೆ ಹರಿಸುತ್ತಾರೆ ಎಂದಿದ್ದಾರೆ" ೮

ರವೀಂದ್ರನಾಥ ಟ್ಯಾಗೂರರು " ಸಂಸ್ಕೃತಿಯೆಂಬುದು ಒಂದು ಆಕಾರವನ್ನು ತಳೆದು ನಿಂತ ಆಕಸ್ಮಿಕ ಘಟನೆಗಳ ಮೊತ್ತವಲ್ಲ. ನಮ್ಮ ಪೂರ್ಣತೆಗಾಗಿ ರೂಪಿಸಿಕೊಂಡು ಯಾವುದೋ ದಿವ್ಯಾದರ್ಶನ ಅಭಿವ್ಯಕ್ತಿ ಇದಕ್ಕೆ ಸಮಾನವಾದ ಭಾರತೀಯ ಪದ 'ಧರ್ಮ' ಮನುಷ್ಯ ನಿಜವಾಗಿ ಏನಾಗಿದ್ದಾನೆಯೊ ಅದರ ಅತ್ಯುತ್ತಮ ಅಭಿವ್ಯಕ್ತಿಯೇ ಧರ್ಮ, ಮನುಷ್ಯನ ಸಾಂಘಕ ಜೀವನದಲ್ಲಿ ಅಭಿವ್ಯಕ್ತಿಗೊಂಡ ಧರ್ಮವೇ ಸಂಸ್ಕೃತಿ ಎಂದಿದ್ದಾರೆ" ೯

ದೇವುಡು ನರಸಿಂಹ ಶಾಸ್ತ್ರಿಗಳು " ಕಲಿತ ವಿದ್ಯೆಯ ಪ್ರಭಾವವೆನ್ನುವುದಕಿಂತಲೂ ಆರಗಿದ ವಿದ್ಯೆಯ ಪರಿಣಾಮವೇ ಸಂಸ್ಕೃತಿ" ಎಂದು ಹೇಳಿ ಅದು ತಳದಿಂದ ತುದಿಯವರೆಗೆ ಆಸ್ತಿಕವಾದುದು, ಧರ್ಮ, ಕರ್ಮ, ಜೀವ, ಬ್ರಹ್ಮ ಜನ್ಮ ಸಂಸ್ಕಾರಗಳನ್ನು ಅಂಗೀಕರಿಸಿರುವುದು ಇಹದಲ್ಲಿ ಋಣಗಳನ್ನು ಪದದಲ್ಲಿ ಲೋಕಾಂತರಗಳನ್ನು ಒಪ್ಪಿರುವುದು ಬಾಳು ಈಗ ಬೇಕಾದ ಹಾಗೆ ಎದ್ದು ಬಿದ್ದರೂ ಕೊನೆಗೆ ಎಂದಾದರೂ ಒಂದು ದಿನ ಆನಂದದಲ್ಲಿ ಮುಗಿಯುವುದು ಎಂಬುದನ್ನು ನಂಬಿರುವುದು ಸಂಸ್ಕೃತಿ ಎಂಬುದಾಗಿ ವಿರವರಿಸಿದ್ದಾರೆ.

ಎಂ. ಚಿದಾನಂದ ಮೂರ್ತಿಯವರು ಹೇಳುವಂತೆ ಮನುಷ್ಯನು ವಂಶಾನುಗತವಾದ ಕೇಲವು ಲಕ್ಷಣಗಳೊಡನೆ ಹುಟ್ಟುತ್ತಾನೆ. ಇವುಗಳನ್ನು ಯಾರೂ ಅವನಿಗೆ ಕಲಿಸಿಕೊಡಬೇಕಾಗಿಲ್ಲ. ಆದರೆ ಇನ್ನೂ ಕೇಲವು ಅಂಶಗಳನ್ನು ಅವನಿಗೆ ಕಲಿಸಕೊಡಬೇಕಾಗುತ್ತದೆ. ಅಥವಾ ತನ್ನ ಪರಿಸರದಿಂದ ಅವನೇ ಕಲಿತುಕೊಳ್ಳುತ್ತಾನೆ ಎಂದಿದ್ದಾರೆ.

ಮಾನವ ಶಾಸ್ತ್ರಜ್ಞರ ಮೆಲ್ವಲ್ಲೆ ಜೆ.ಹರ್ಸ್ಕೋವಿಟ್ಸ್ ಹೇಳುವ ಪ್ರಕಾರ "Culture is the man - made part of the environment" ಎಂದಿದ್ದಾರೆ ಅಂದರೆ ಪರಿಸರದ ಮಾನವನ ನಿರ್ಮಿತಿಯ ಭಾಗವೆಲ್ಲವೂ ಸಂಸ್ಕೃತಿ ಎಂಬ ವಿವರಣೆಯು ಸಾಮಾಜಿಕ ಪರಿಸರವನ್ನು ಕುರಿತದ್ದೆ ಆಗಿದೆ " ನಿಸರ್ಗದ ಪರಿಸರವೊಂದು ಈಗಾಗಲೇ ಅಸ್ತಿತ್ವದಲ್ಲಿದ್ದು ಮನುಷ್ಯನಾದವನು ಪ್ರಕೃತಿ ಸಹಜವಾದ ಪರಿಸರದಲ್ಲಿ ತನ್ನ ಸಾಮಾಜಿಕ ಪರಿಸರವೊಂದನ್ನು ನಿರ್ಮಿಸಿದ್ದಾನೆ" ಆದುದರಿಂದ ಪ್ರಕೃತಿಯನ್ನು ಪರಿವರ್ತಿಸಿಕೊಂಡು ಜೀವಸುವುದೇ ಮನುಷ್ಯನ ವಿಶಿಷ್ಟಗುಣವಾಗಿದೆ. ಓಗಾಗಿ ಪ್ರಕೃತಿ ಸಂಸ್ಕೃತಿ ನಡುವಿನ ಹೊಂದಾಣಿಕೆಯಲ್ಲಿ ಮಾನವ ನಿರ್ಮಿತವಾದ ಸಾಮಾಜಿಕ ಪರಿಸರವನ್ನು ಸಂಸ್ಕೃತಿ ಪ್ರತಿನಿಧಿಸುತ್ತದೆ. ಎಂದಿದ್ದಾರೆ

ಸಂಸ್ಕೃತಿ ಸಾಮಾಜಿಕ ಪ್ರಕ್ರಿಯೆ ಯಾಗಿದ್ದು ಸಮಾಜವು ಭೌಗೋಳಿಕ ಸನ್ನಿವೇಶ, ಸಮಯ, ಸಂದರ್ಭಗಳನ್ನು ಅವಲಂಭಿಸಿರುತ್ತದೆ. ಆದ್ದುರಿಂದ ಪ್ರಾದೇಶಿಕವಾಗಿ ಪ್ರತಿಯೊಂದು ಪ್ರದೇಶದ ಸಂಸ್ಕೃತಿಯ ವೈಪಿಧ್ಯಗಳನ್ನು ತಿಳಿಯಬೇಕಾದರೆ ಅಲ್ಲಿನ ಜನಗಳು ಧರ್ಮಗಳು ಅವತ ವೃತ್ತಿ, ಜೀವನ ವಿಧಾನ

ಆಚಾರ, ನಂಬಿಕೆ ಸಂಪ್ರದಾಯ ಬಾಷೆ ಸಾಮಾಜಿಕ ಪದ್ದತಿ, ಕಟ್ಟುಪಾಡುಗಳು, ಸಂಸ್ಕೃತಿಕ ವಿಶಿಷ್ಟ್ಯತೆಗಳು ಸಂಸ್ಕೃತಿಯ ಪಲ್ಲಟಗಳು ಮುಂತಾದ ಅಂಶಗಳನ್ನು ತಿಳಿಯಬೇಕಾದುದು ಅತ್ಯವಶ್ಯಕ ಈ ದೃಷ್ಠಿಯಿಂದ ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕಿನ ಬೆಳ್ಳೂರನ್ನು ಅಧ್ಯಯನದ ಅನುಕೂಲಕ್ಕೆ ಸೀಮಿತಗೊಳಿಸಿಕೊಂಡು ಅದರ ವ್ಯಾಪ್ತಿಯಲ್ಲಿ ಕಂಡು ಬರುವ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಗುರುತಿಸುವ ಪ್ರಯತ್ನಮಾಡಲಾಗಿದೆ

# ಅಧ್ಯಯನದ ಉದ್ದೇಶ :

ಬೆಳ್ಳೂರು ನಾಗಮಂಗಲ ತಾಲ್ಲೋಕಿನಲ್ಲಿಯೇ ಒಂದು ವಿಶಿಷ್ಟವಾದ ಊರಾಗಿದು ಇದು ಹೋಬಳಿ ಕೇಂದ್ರವಾಗಿದ್ದು ಆದಿಚುಂಚನಗಿರಿ ಕ್ಷೇತ್ರದ ಪ್ರಭಾವಕ್ಕೆ ಒಳಗಾಗಿದೆ. ಈ ಊರಿನ ಜನರ ಶಿಕ್ಷಣ ಶ್ರೀ ಕ್ಷೇತ್ರದ ಶಿಕ್ಷಣ ಸಂಸ್ಥೆಯನ್ನು ಅವಲಂಬಿಸಿ ಕೊಂಡಿದೆ ಎಲ್.ಕೆ.ಜಿಯಿಂದ ಪ್ರಾರಂಭವಾಗಿ ಬಿ.ಎ., ಬಿ.ಎಂ.ಕಾಂ., ಬಿ.ಎಸ್ಸಿ, ಡಿಪ್ಲೋಮೋ ಇಂಜಿನಿಯರಿಂಗ್ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ, ನರ್ಸಿಂಗ್ ಕಾಲೇಜುಗಳು, ಫಾರ್ಮಸಿ ಕಾಲೇಜುಗಳು ಈ ಊರಿನ ಸುತ್ತ ಮುತ್ತಲೂ ಇವೆ. ಇಲ್ಲಿ ವಿದ್ಯಾಭ್ಯಾಸ ಪಡೆದು ಕೇವಲ ನೂರು ಕಿ.ಮಿ. ಅಂತರದಲ್ಲಿರುವ ಬೆಂಗಳೂರಿನಲ್ಲಿ ಹೆಚ್ಚಿನ ಜನ ಉದ್ಯೋಗವನ್ನು ಅವಲಂನಿಸಿಕೊಂಡಿದ್ದಾರೆ.

ಬೆಳ್ಳೂರು ಇಂದು ಗ್ರಾಮವಾಗಿ ಉಳಿದಿಲ್ಲ ಪಟ್ಟಣ್ಣವಾಗಿಯೂ ಪರಿವರ್ತನೆಗೊಂಡಿಲ್ಲ. ಸುಮಾರು ೧೦.೦೦೦ ಸಾವಿರ ಜನಸಂಖ್ಯೆಯನ್ನು ಒಳಗೊಂಡಿ ದೊಡ್ಡ ಗ್ರಾಮವಾಗಿದೆ. ಮುಂದೆ ಇದು ಪಟ್ಟಣ ಪಂಚಾಯಿತಿಯಾಗಿ ಬದಲಾವಣೆಯಾಗುವ ಸಂಭವವಿದೆ.

ಈ ಊರಿನಲ್ಲಿ ವಿವಿಧ ಧರ್ಮಗಳಾದ ಹಿಂದೂ, ಮುಸ್ಲಿಂ ಮತ್ತು ಜೈನ ~~ಬೌದ್ಧ~~ ಧರ್ಮಿಯರು ನೆಲೆಸಿದ್ದಾರೆ ಈ ದೃಷ್ಟಿಯಿಂದ ಜಾತ್ಯತೀತ ಪ್ರದೇಶವೆಂದು ಕರೆಯಬಹುದಾದರೂ ಸಾಂಪ್ರದಾಯಿಕವಾದ ಜಾತಿ ಪದ್ದತಿ ಆಧುನಿಕತೆಯ ಅನುಕೂಲಗಳ ಕಾರಣ ಜೀವನ ಪದ್ದತಿ ಬದಲಾಗಿದ್ದು ಜಾತಿಯ ಬಂಧುಗಳು ಸಡಿಲಗೊಂಡಿದ್ದರೂ ಅಂತರಂಗದಲ್ಲಿನ ಅಸಮಾದಾನಗಳಿಂದಾಗಿ ಜನರಲ್ಲಿ ವಿಶ್ವಾಸ–ನಂಬಿಕೆಗಳು ದೂರವಾಗಿವೆ ಸಾಮಾಜಿಕವಾಗಿ ಸಮರಸ್ಯದ ಹೊಂದಾಣಿಕೆ ಮನೋಭಾವನೆಳಳು ಕಂಡು ಬರುತ್ತಿದೆ.

ಈ ಊರನ್ನು ಅನೇಕ ರಾಜವಂಶಗಳು, ಮಾಡಲೀಕರು, ಸಾಮ್ರಾಟರು, ಚಕ್ರಾಧಿಪತಿಗಳು, ಅಧೀನ ಸಾಮಂತರು, ಪಾಳೆಗಾರರು ಮುಂತಾದವರು ತಮ್ಮ ಅನುಕೂಲಕ್ಕೆ ತಕ್ಕಂತೆ ಆಡಳಿತ ನಡೆಸಿ ತಮ್ಮ ವೈಭವಗಳನ್ನು ಮೆರೆದಿದ್ದಾರೆ. ಇವರ ಕಾಲಾವಧಿಯಲ್ಲಿ. ಇಲ್ಲಿನ ರಾಜಕೀಯ, ಆರ್ಥಿಕ, ಸಾಮಾಜಿಕ,
ಸಂಸ್ಕೃತಿಕ ಅಧ್ಯಯ ನಿರ್ಧಿಷ್ಟಪಡಿಸಿರುವ ಚೌಕಟ್ಟನಲ್ಲಿ. ಇಲ್ಲಿನ ವಿವಿಧ ಸಂಸ್ಕೃತಿಕವಾದ ಆಯಾಮಗಳನ್ನು ಕುರಿತ ಅಧ್ಯಯನವಾಗಿದೆ. ವಿಷಯದ ವ್ಯಾಪ್ತಿ ಸೀಮಿತವಾಗಿದ್ದರೂ ಇಲ್ಲಿನ ಇತಿಹಾಸ, ಧರ್ಮ, ಭಾಷೆ, ಕಲೆ, ವಿವಿಧ ಜಾತಿ ಧರ್ಮ, ಆಚರಣೆ ನಂಬಿಕೆ ಸಂಪದಾಯ, ಜಾತ್ರೆ ಹಬ್ಬ ಹರಿದಿನದ ಉತ್ಸವಗಳು
ಪಾಳೇಗಾರರ ಆಡಳಿತ, ಅವರು ನಿರ್ಮಿಸಿದ ದೇವಾಲಯಗಳು ಕೋಟೆ ಕೊತ್ತಲಗಳು ಕೆರೆಗಳು ಮುಂತಾದವುಗಳನ್ನು ಕುರಿತದ್ದಾಗಿದೆ ಪ್ರತಿಯೊಂದು ವಿಷಯವನ್ನು ಪ್ರತ್ಯೇಕವಾದ ಅಧ್ಯಯನಕ್ಕೆ ಒಳಪಡಿಸುವುದು ಅಸಾಧ್ಯವಾದುದು ನಿರ್ದಿಷ್ಟ ಪಡಿಸಿಕೊಂಡಿರುವ ವ್ಯಾಪ್ತಿಯಲ್ಲಿನ ಸಾಂಸ್ಕೃತಿಕ ಅಂಶಗಳನ್ನು ಅಧಿಕೃತವಾದ ದಾಖಲೆಗಳು ಮತ್ತು ಕ್ಷೇತ್ರಕಾರ್ಯಚಾರಣೆಯ ಮೂಲಕ ದೊರೆತಿರವ ಮಾಹಿತಿನ್ನಾದರಿಸಿದ ಅಧ್ಯಯನ ಮಾಡಲಾಗಿದೆ. ಆದ್ದರಿಂದ ಅವುಗಳನ್ನು ಬೇರೆ ಬೇರೆ ಅಧ್ಯಯಗಳನ್ನಾಗಿ ಮಾಡಿಕೊಂಡು ಪ್ರಬಂಧದಲ್ಲಿ ಕ್ರೋಢೀಕರಿಸಿಲಾಗಿದೆ.

## ಅಧ್ಯಯನದ ವ್ಯಾಪ್ತಿ

ಈಗಾಗಲೇ ತಿಳಿಸಿರುವಂತೆ ವಿಷಯಕ್ಕೆ ಸಂಬಂಧಿಸಿದಂತೆ ಸಾಂಸ್ಕೃತಿಕ ಅಂಶಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಹಲವು ವಿಭಾಗಗಳನ್ನಾಗಿ ವಿಂಗಡಿಸಲಾಗಿದೆ. ಸಂಸ್ಕೃತಿಯನ್ನು ಕುರಿತ ಬೇರೆ ಬೇರೆ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಸಂಸ್ಕೃತಿಯ ಸ್ವಭಾವ ಸ್ವರೂಪಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನದ ಉದ್ದೇಶಗಳನ್ನು ಮೊದಲ ಅಧ್ಯಾಯದಲ್ಲಿ ಸ್ಪಷ್ಟಪಡಿಸಲಾಗಿದೆ. ಇದು ಪರಿಚಯಾತ್ಮಕವಾಗಿದ್ದು ಬೆಳ್ಳೂರಿನ ಸಂಸ್ಕೃತಿ - ವಿವರಗಳ ಪೀಠಿಕೆಯಾಗಿದೆ.

ಎರಡನೆಯ ಅಧ್ಯಾಯದಲ್ಲಿ ಬೆಳ್ಳೂರಿನ ಭೂಪಟ ಬೌಗೋಳಿಕ ವಿವರಗಳನ್ನು ತಿಳಿಸಲಾಗಿದೆ. ಹವಮಾನ, ಮಣ್ಣಿನ ಗುಣಲಕ್ಷಣ, ಮಳೆ-ಬೆಳೆ, ನೀರಾವರಿ, ಕೃಷಿ, ವಿವರಗಳು, ಗೃಹಕೈಗಾರಿಕೆಗಳು, ಸಾರಿಗೆ ಸಂಪರ್ಕ, ಆಡಳಿತಾತ್ಮಕ ವಿವರಣೆಗಳು, ಎಲ್ಲೆಕಟ್ಟುಗಳು, ಮುಂತಾದವುಗಳನ್ನು ಕುರಿತ ವಿವರಗಳನ್ನು ಒಳಗೊಂಡಿದೆ.

ಮೂರನೇ ಅಧ್ಯಾಯದಲ್ಲಿ ಬೆಳ್ಳೂರಿನ ಮೇಲೆ ಶ್ರೀ ಆದಿಚುಂಚನಗಿರಿ ಕ್ಷೇತ್ರದ ಪ್ರಭಾವ ಅದರ ಶಿಕ್ಷಣ ಸಂಸ್ಥೆಗಳು ಈ ಶಿಕ್ಷಣ ಸಂಸ್ಥೆಗಳಿಂದ ಪ್ರಯೋಜನವನ್ನು ತಿಳಿಸಲಾಗಿದೆ. ಇಲ್ಲಿನ ಶ್ರೀ ಆದಿಚುಂಚನಗಿರಿ ಆಸ್ಪತ್ರೆ & ಸಂಶೋಧನಾಲಯ ಇದು ಬೆಳ್ಳೂರು ಮತ್ತು ಅದರ ಸುತ್ತ ಮುತ್ತಲಿನ ಹಳ್ಳಿಗಳಿಗೆ ಉಪಯೋಗವಾಗಿರುವ ವಿಚಾರವನ್ನು ತಿಳಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ವಿವಿಧ ರೀತಿಯ ಸಾಂಸ್ಕೃತಿಕ ನೆಲೆಗಳನ್ನಾಧರಿಸಿ ಕೊಂಡಿರುವ ರಾಜಕೀಯ ಇತಿಹಾಸ ಸಾಮಾಜಿಕ ಜೀವನ, ಆರ್ಥಿಕ ಜೀವನವನ್ನು ತಿಳಿಸಲಾಗಿದೆ. ಇದರ ಜೊತೆಗೆ ಕೃಷಿ, ವಾಣಿಜ್ಯ, ಗೃಹ ಕೈಗಾರಿಕೆಗಳ ಬಗ್ಗೆ ತಿಳಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ಬೆಳ್ಳೂರಿನಲ್ಲಿ ಆಳ್ವಿಕೆ ನಡೆಸಿದ ರಾಜರು, ಅಧೀನ ಸಾಮಂತರು, ಪಾಳೆಗಾರರುಇವರ ಆಡಳಿತ ನಡೆಸಿದ ರಾಜಕೀಯ ಇತಿಹಾಸವನ್ನು ತಿಳಿಸಲಾಗಿದೆ. ಶಾಸನಗಳು, ವೀರಗಲ್ಲುಗಳು, ಮಾಸ್ತಿಕಲ್ಲುಗಳ ದಾಖಲೆಗಳನ್ನಾಧರಿಸಿ ವಿವರಿಸಿದೆ. ಸಾಂಸ್ಕೃತಿಕವಾಗಿ ದೇವಾಲಯಗಳ ಸ್ವರೂಪ ಮತ್ತು ಧಾರ್ಮಿಕ ವೈಶಿಷ್ಟ್ಯಗಳನ್ನು ಬದಲಾದ ಕಾಲ ಘಟ್ಟದಲ್ಲಿ ಅವುಗಳ ಸ್ಥಿತಿ – ಗತಿಗಳನ್ನು ತಿಳಿಸಲಾಗಿದೆ. ಇದರ ಎರಡನೇ ಭಾಗದಲ್ಲಿ ಗ್ರಂಥ

ಸಾಹಿತ್ಯದಲ್ಲಿ ಕನ್ನಡದ ಕಣ್ವ ಬಿ.ಎಂ.ಶ್ರೀ ಯವರ ಜೀವನ ವಿಧಾನ, ಬರಹಗಳು, ಸಾಧನೆಗಳು, ಪ್ರಶಸ್ತಿಗಳನ್ನು ತಿಳಿಸಲಾಗಿದೆ.

ಆರನೇ ಅಧ್ಯಾಯದಲ್ಲಿ ಸಾಮಾಜಿಕ ಸಾಂಸ್ಕೃತಿಕ ಅಧ್ಯಾಯದಲ್ಲಿ ಎಲ್ಲಮ್ಮದೇವಿ, ದೊಡ್ಡಮದೇವಿ, ಚಿಕ್ಕಮ್ಮದೇವಿಯ ಹಬ್ಬಗಳು, ಉತ್ಸವಗಳ ಆಚರಣೆಗಳನ್ನು ತಿಳಿಸಲಾಗದೆ.

ಅಧ್ಯಾಯ ಏಳರಲ್ಲಿ ಪ್ರದರ್ಶನ ಕಲೆಗಳಿಗೆ ಸಂಬಂಧ ಪಟ್ಟ ವಿವರಗಳನ್ನು ಒಳಗೊಂಡಿದೆ. ಸಂಗೀತಕ್ಕೆ ಹೆಸರು ವಾಸಿಯಾದ ಬೆಳ್ಳೂರು ಸಹೋದರಿಯರು, ಭರತನಾಟ್ಯ ತೊಗಲ ಗೊಂಬೆಯಾಟದಲ್ಲಿ ಪ್ರಸಿದ್ಧವಾದ ಪುಟ್ಟಸ್ವಾಮಚಾರ್ಯರ ಕೈಚಳಕ ತಿಳಿಸಲಾಗಿದೆ. ಗ್ರಾಮೀಣ ರಂಗ ಭೂಮಿ, ಆದುನಿಕ ರಂಗಭೂಮಿ, ಜನಪದ ನೃತ್ಯಗಳು ಮುಂತಾದ ವಿಷಯಗಳನ್ನು ತಿಳಿಸಲಾಗಿದೆ. ಕೊನೆಯದಾಗಿ ಸಮಾರೋಪದಲ್ಲಿ ಪ್ರಬಂಧದಲ್ಲಿ ಪ್ರಸ್ತಾಪಗೊಂಡಿರುವ ಹಲವಾರು ವಿಷಯಗಳನ್ನು ಹಾಗೂ ಗ್ರಂಥ ಸೂಚಿಗಳು ಮತ್ತು ಕೆಲವು ವಿಷಯಗಳಿಗೆ ಸಂಬಂಧ ಪಟ್ಟ ಕಪ್ಪು ಬಿಳುಪಿನ ಫೋಟೋಗಳನ್ನು ಕೊಡಲಾಗಿದೆ.

## ಅಡಿ ಟಿಪ್ಪಣಿ:-

೧. ಡಾ॥ ಚಿದಾನಂದ ಮೂರ್ತಿ ಎಂ. "ಕ.ಶಾ.ಸಾ.ಅ"

೨. ಡಾ॥ ರಹಮತ್ ತಿರಿಕೆರೆ "ಕನ್ನಡ ಸಂಸ್ಕೃತಿ" (ಕ.ಸಾ.ಅ)

೩. ದೇವುಡು ನರಸಿಂಹಶಾಸ್ತ್ರಿ 'ಕರ್ನಾಟಕ ಸಂಸ್ಕೃತಿ'

೪. **A L Krober Anthropologg P.G (1948)**

**5.** ಡಾ॥ ಜೀ.ಶಂ ಪರಮಶಿವಯ್ಯ – ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು ಪು- **8 (1989)**

೬. ರವೀದ್ರನಾಥ ಟಾಗೂರ್ ದ ಕಲ್ಚರ್ ಆಫ್ ಕಲ್ಚರ್ **1921** ಕ **31**

೭. ದೇವುಡು ನರಸಿಂಹ ಶಾಸ್ತ್ರಿಗಳು – ಉದ್ಧೃತ

೮. **Herskovits – cultural anthropology**

# ಅಧ್ಯಾಯ – ೨

## ಅಧ್ಯಾಯ – ೨ ಭೌಗೋಳಿಕ ಹಿನ್ನೆಲೆ

ಯಾವುದೇ ಪ್ರದೇಶದ ಗುಣಲಕ್ಷಣಗಳನ್ನು ತಿಳಿಯ ಬೇಕಾದರೆ ಅಲ್ಲಿನ ಬೌಗೋಳಿಕ ಪರಿಸರವನ್ನು ಗಮನಿಸುವುದು ಅವಶ್ಯಕ ಬೌಗೋಳಿಕವಾಗಿ ಪ್ರಾದೇಶಿಕವಾಗಿ ಮೇರೆಗಳು ಅಲ್ಲಿನ ನೈಸರ್ಗಿಕ ಸಂಪತ್ತು, ಹವಾಮಾನ, ವಾಯುಗುಣ, ವೃತ್ತಿ, ಜನಸಾಂದ್ರತೆ, ಸಾರಿಗೆ ಸಂಪರ್ಕ, ಔದ್ಯೋಗಿಕತೆ, ಬಾಷೆ ಮುಂತಾದವುಗಳು ಅಲ್ಲಿನ ಸಂಸ್ಕೃತಿಯ ಮೇಲೆ ಪ್ರಭಾವ ಬೀರುತ್ತವೆ. ಪ್ರಸ್ತುತ ಬೆಳ್ಳೂರಿನ ಬೌಗೋಳಿಕ ಪರಿಸರ ಯಾವ ಸ್ವರೂಪದ್ದು ಎಂಬುದನ್ನು ತಿಳಿಯುವುದು ಅಗತ್ಯ.

ಕರ್ನಾಟಕ ರಾಜ್ಯದ ದಕ್ಷಿಣದ ಬಯಲು ಪ್ರದೇಶದಲ್ಲಿರುವ ಜಿಲ್ಲೆ ಮಂಡ್ಯ. ಈ ಜಿಲ್ಲೆಯಲ್ಲಿ ರೈತರು ಮೊದಲು ಮಳೆಯನ್ನು ಅವಲಂಬಿಸಿ ಕೊಂಡು ಬೆಳೆ ಬೆಳೆಯುತ್ತಿದ್ದರು. ಇಲ್ಲಿನ ರೈತರ ಸ್ಥಿತಿ ಮಳೆಯೊಡನೆ ಆಡುವ ಜೂಟಾಟದಂತಿತ್ತು. ಆದರೆ ನಂತರದ ದಿನಗಳಲ್ಲಿ ಮೈಸೂರಿನ ಒಡೆಯರಾದ ನಾಲ್ವಡಿ ಕೃಷ್ಣರಾಜ ಒಡೆಯರು ಹಾಗೂ ದಿವಾನರಾದ ವಿಶ್ವೇಶ್ವರಯ್ಯನವರ ಪರಿಶ್ರಮದಿಂದ ಕಾವೇರಿ ನದಿಗೆ ಕನ್ನಂಬಾಡಿ ಎಂಬಲ್ಲಿ ಅಣೆಕಟ್ಟೆ ಕಟ್ಟಿಸಿದರು. ಇದರ ಪಲವಾಗಿ ಇಂದು ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕನ್ನು ಹೊರತು ಪಡಿಸಿ ಹಚ್ಚ ಹಸಿರಿನಿಂದ ಕಂಗೊಳಿಸುತ್ತಿದೆ.

ಮಂಡ್ಯ ಜಿಲ್ಲೆಯಲ್ಲಿ ಏಳು ತಾಲ್ಲೂಕುಗಳಿವೆ. ಅವುಗಳೆಂದರೆ ನಾಗಮಂಗಲ, ಮಂಡ್ಯ, ಮದ್ದೂರು, ಮಳವಳ್ಳಿ, ಶ್ರೀರಂಗಪಟ್ಟಣ, ಕೆ.ಆರ್.ಪೇಟೆ. ಈ ಏಳು ತಾಲ್ಲೂಕುಗಳಲ್ಲಿ ನಾಗಮಂಗಲವೂ ಒಂದು ಇದು ಆಗಾಗ್ಗೆ ಬರಗಾಲಕ್ಕೆ ಸಿಕ್ಕು ನಲುಗುತ್ತಿರುತ್ತದೆ. ಇತ್ತೀಚಿನ ದಿನಗಳಲ್ಲಿ ಹೇಮಾವತಿ ಜಲಾಶಯದಿಂದ ಕೆರೆಗಳಿಗೆ ನೀರನ್ನು ಹರಿಸಿ ಸ್ವಲ್ಪ ಮಟ್ಟಿಗೆ ಹಸಿರು ಕಾಣುವಂತೆ ಮಾಡಿದ್ದಾರೆ.

ಕೆರೆನೀರು, ಕೊಳವೆ ಬಾವಿಗಳ ನೀರನ್ನು ಬಳಸಿಕೊಂಡು ತೆಂಗು, ಭತ್ತ, ತರಕಾರಿಗಳನ್ನು ಬೆಳೆಯುತ್ತಿದ್ದಾರೆ. ಮಂಡ್ಯ ಜಿಲ್ಲೆಯಲ್ಲಿಯೇ ಹೆಚ್ಚು ತರಕಾರಿ ಬೆಳೆಯು ಪ್ರದೇಶವಾಗಿದೆ. ಆದರೆ ತರಕಾರಿಗೆ ಸರಿಯಾದ ಬೆಲೆ ಸಿಗದೆ ಹಾಕಿದ ಖರ್ಚು ಬಾರದೆ ಸಾಲದ ಬಾಧೆಯಿಂದ

ನರಳುವಂತಾಗಿದೆ. ಇದರಿಂದ ಬೇಸತ್ತ ಜನ ಬೆಂಗಳೂರಿನಂತ ಮಹಾನಗರ, ಭದ್ರಾವತಿ, ಊಟಿ ಹಾಗೂ ವಿದೇಶಗಳನ್ನು ಅವಲಂಬಿಸುವಂತಾಗಿದೆ. ಇಂದು ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ, ಆರ್ಥಿಕವಾಗಿ ಸ್ವಲ್ಪ ಮಟ್ಟಿನ ಅಭಿವೃದ್ಧಿಯತ್ತ ಸಾಗಿದೆ.

ಈ ತಾಲ್ಲೂಕಿನಲ್ಲಿ ಐದು ಹೋಬಳಿಗಳಿವೆ. ಅವುಗಳೆಂದರೆ ಕಸಬ, ಬೆಳ್ಳೂರು, ಬಿಂಡಿಗನವಿಲೆ, ದೇವಲಾಪುರ, ಹೊಣಕೆರೆ ಇವುಗಳಲ್ಲಿ ಸ್ವಲ್ಪ ಮಟ್ಟಿಗೆ ಆರ್ಥಿಕವಾಗಿ, ಸಾಂಸ್ಕೃತಿಕವಾಗಿ, ಶೈಕ್ಷಣಿಕವಾಗಿ ಮುಂದುವರಿದಿರುವ ಊರೇ ಬೆಳ್ಳೂರು.

ಈ ಊರು ಹೊಯ್ಸಳರ ಕಾಲದಲ್ಲಿ ಬಂದ ಅಗ್ರಹಾರವಾಗಿತ್ತು. ಇದರ ಆಡಳಿತವನ್ನು ಪೆರಮಾಳ ದಂಡನಾಯಕ ನೋಡಿಕೊಳ್ಳುತ್ತಿದ್ದ. ಇದು ಹೊಯ್ಸಳದೊರೆ ವೀರ ನರಸಿಂಹನಿಂದ ಪಡೆದ ಕೊಡುಗೆಯಾಗಿದೆ. ಇದಕ್ಕೆ ಸಾಕ್ಷಿ ಎಂಬಂತೆ ಈ ಊರಿನಲ್ಲಿರುವ ೨೪ ಶಾಸನಗಳು ಇದನ್ನು ದೃಢ ಪಡಿಸಿವೆ. ಇವರ ಕಾಲದಲ್ಲಿ ಈ ಊರಿಗೆ ಉದ್ಭವ  ನರಸಿಂಹಪುರ ಎಂಬ ಹೆಸರಿದೆ. ನಂತರ ರಜತ ಪುರವಾಯಿತು. ಸುಮಾರು ವರ್ಷಗಳ ನಂತರ ಶ್ವೇತಪುರ ಎಂದು ಕರೆದರು.

| | | | |
|---|---|---|---|
| ರಜತಪುರ | - | ರಜತ – ಬೆಳ್ಳಿ, | ಪುರ – ನಗರ |
| ಶ್ವೇತಪುರ | - | ಶ್ವೇತ – ಬೆಳ್ಳಿ, | ಪುರ – ನಗರ |

ಬೆಳ್ಳಿಯ ಬಣ್ಣ ಬಿಳಿ, ಶ್ವೇತ ಎಂದರೆ ಬಿಳಿ, ಈ ಎರಡೂ ಬಿಳಿ ಸೇರಿ ಬೆಳ್ + ಊರು = ಬೆಳ್ಳೂರು ಆಗಿದೆ ಎಂಬ ಐತಿಹ್ಯವಿದೆ.

ಈ ಊರು ಹೊಯ್ಸಳರ ವಿಜಯನಗರದ ಮೈಸೂರು ಒಡೆಯರ ಆಳ್ವಿಕೆಗೆ ಒಳಪಟ್ಟಿರುತ್ತದೆ. ಇದು ಬೆಳಗಳೂರು ಮಂಗಳೂರು ರಾಷ್ಟ್ರೀಯ ಹೆದ್ದಾರಿ 48 (೪೮) ಕ್ಕೆ ಹೊಂದಿಕೊಂಡಂತೆ ಇದೆ. ಬೆಂಗಳೂರಿನಿಂದ 100 (೧೦೦) ಕಿ.ಮಿ ಅಂತರದಲ್ಲಿದೆ. ಮೈಸೂರು, ತುಮಕೂರು ರಾಜ್ಯ ರಸ್ತೆ ಈ ಊರಿನ ಮೂಲಕವೇ ಹಾಗು ಹೋಗಿದೆ. ಮೈಸೂರಿನಿಂದ 75 (೭೫) ಕಿ.ಮಿ ದೂರದಲ್ಲಿದೆ. ಈ ನಗರಗಳಿಗೆ ಹತ್ತಿರದಲ್ಲಿರುವುದರಿಂದ ಇಂದು ಈ ಊರು ಒಂದು ವ್ಯಾಪಾರ ಕೇಂದ್ರವಾಗಿ ಮಾರ್ಪಟ್ಟಿದೆ.

ಈ ಊರಿನ ಈಶಾನ್ಯ ದಿಕ್ಕಿನಲ್ಲಿ ಶ್ರೀ ಆದಿಚುಂಚನಗಿರಿ ಕ್ಷೇತ್ರವಿದೆ. ಇದರ ಪ್ರಭಾವದಿಂದ ಇಂದು ಬೆಳ್ಳೂರು ಮತ್ತು ಇದರ ಸುತ್ತಮುತ್ತಲ ಹಳ್ಳಿಗಳು ಶೈಕ್ಷಣಿಕವಾಗಿ ಸುಧಾರಿಸಿವೆ. ಶ್ರೀ

ಆದಿಚುಂಚನಗಿರಿಗೆ ಹೋಗುವ ಮಾರ್ಗದಲ್ಲಿ ಚನ್ನಯ್ಯನ ಕೊಪ್ಪಲು, ಅಂಬಲ ಜೀರಹಳ್ಳಿ ಇದೆ. ಬೆಳ್ಳೂರಿನ ಪೂರ್ವದಲ್ಲಿ ವಡ್ಡರಹಳ್ಳಿ, ತಾವರೆಕೆರೆ, ಎಲೆಕೊಪ್ಪ, ಹದ್ದಿನಕಲ್ಲು ಹನುಮಂತರಾಯ ಬೆಟ್ಟ ಇದೆ. ಆಗ್ನೇಯ ದಿಕ್ಕಿನಲ್ಲಿ ನಲ್ಲೀಗೆರೆ ಇದೆ. ಈ ನಲ್ಲೀಗೆರೆ ಬೆಳ್ಳೂರಿಗೆ ಮೊದಲ ಹೋಬಳಿ ಕೇಂದ್ರವಾಗಿತ್ತು. ನಂತರದ ಬದಲಾವಣೆಯಿಂದ ಬೆಳ್ಳೂರು ಹೋಬಳಿ ಕೇಂದ್ರವಾಯಿತು. ಬೆಳ್ಳೂರಿನ ದಕ್ಷಿಣಕ್ಕೆ ಬೊಮ್ಮನಹಳ್ಳಿ ಇದೆ. ಇದು ಬೆಂಗಳೂರು – ಮಂಗಳೂರು ರಸ್ತೆ ಹಾಗೂ ಮೈಸೂರು – ತುಮಕೂರು ರಸ್ತೆಗಳು ಸಂದಿಸುವ ಸ್ಥಳವಾಗಿದೆ. ಆದ್ದರಿಂದ ಈ ಸ್ಥಳವನ್ನು ಬೊಮ್ಮನಹಳ್ಳಿ ಕ್ರಾಸ್ ಎಂದು ಕರೆಯುತ್ತಿದ್ದರು. ಇತ್ತೀಚೆಗೆ ಇದನ್ನು ಬೆಳ್ಳೂರ್ ಕ್ರಾಸ್ ಎಂದೇ ಹೆಸರು ವಾಸಿಯಾಗಿದೆ. ಬೆಳ್ಳೂರಿನಲ್ಲಿ ಜನಸಂಖ್ಯೆ ಹೆಚ್ಚಾದಂತೆ ವಸತಿ ಸಮಸ್ಯೆ ಉಂಟಾಗಿ ಬೆಳ್ಳೂರನ್ನು ಬಿಟ್ಟು ಕೆಲವು ಮುಸ್ಲಿಂರು ಬೆಳ್ಳೂರು ಮತ್ತು ಬೆಳ್ಳೂರು ಕ್ರಾಸ್ ಮಧ್ಯದಲ್ಲಿ ಉಮರ್ ನಗರ, ಸಯದ್ ನಗರ, ರಹಮತ್ ನಗರಗಳನ್ನು ನಿರ್ಮಿಸಿಕೊಂಡು ವಾಸಿಸುತ್ತಿದ್ದಾರೆ. ಇವಲ್ಲದೆ ನಾಯಕನಕೊಪ್ಪಲು, ಕೋಡಿನಾಗಲಾಪುರ, ಸಿದ್ದಯ್ಯನತೋಟ, ಪಾಳೇದಹಳ್ಳಿ ಗಳು ಇದ್ದು ಇವು ಬೆಳ್ಳೂರು ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿವೆ.

ಬೆಳ್ಳೂರಿನ ನೈಋತ್ಯದಲ್ಲಿ ಜವರನಹಳ್ಳಿ, ಬಾಲಗಂಗಾಧರನಾಥ ನಗರ ಇದೆ (ಬಿ.ಜಿ.ನಗರ). ಶ್ರೀ ಆದಿಚುಂಚನಗಿರಿ ಕ್ಷೇತ್ರದ ಶೈಕ್ಷಣಿಕ ಸಂಸ್ಥೆಗಳು ಇಲ್ಲಿವೆ. ಎಲ್.ಕೆ.ಜಿ ಯಿಂದ ಪ್ರಾರಂಭವಾಗಿ ತಾಂತ್ರಿಕ ಕಾಲೇಜು ಹಾಗೂ ಮೆಡಿಕಲ್ ಕಾಲೇಜು ಹಾಗೂ ಆಸ್ಪತ್ರೆ ಮತ್ತು ಸಂಶೋಧನಾ ಕೇಂದ್ರವಿದೆ. ಬೆಳ್ಳೂರಿನ ಪಶ್ಚಿಮ ಭಾಗದಲ್ಲಿ ಮಾರುತಿಪುರ, ಮಂತನಹಳ್ಳಿ, ನಾಯಕನಕೊಪ್ಪಲು ಗಳಿವೆ. ವಾಯುವ್ಯ ಭಾಗದಲ್ಲಿ ಅಲ್ಲಾಳ ಸಮುದ್ರ (ದಾಸನಕೆರೆ) ಇದೆ. ಇದು ಬೆಳ್ಳೂರಿಗೆ ಕುಡಿಯುವ ನೀರು ಹಾಗೂ ವ್ಯವಸಾಯಕ್ಕೆ ನೀರನ್ನೊದಗಿಸುತ್ತದೆ. ಬೆಳ್ಳೂರಿನ ಉತ್ತರ ಭಾಗದಲ್ಲಿ ವೀರವೈಷ್ಣವ ನದಿ ಹರಿಯುತ್ತದೆ. ಇದೊಂದು ಜೀವನದಿಯಾಗಿ ಬೆಳ್ಳೂರಿನ ವರಪ್ರಸಾದವಾಗಿದೆ. ಈ ನದಿಯ ದಡದಲ್ಲಿ ಕೋಡಿ ನಾಗಲಾಪುರ ಆಚೆಗೆ ಮುದಗೆರೆ ಊರುಗಳಿವೆ.

ಅಧಿಕಾರ ವಿಕೇಂದ್ರೀಕರಣದ ಹಿನ್ನೆಲೆಯಲ್ಲಿ ಈ ಊರನ್ನು ಟೌನ್ ಪಂಚಾಯತಿಯಾಗಿ ಮಾಡಲಾಗಿತ್ತು. ಆದರೆ ಜನಸಂಖ್ಯೆ ಆಧಾರದ ಮೇಲೆ ಗ್ರಾಮ ಪಂಚಾಯಿತಿಯನ್ನಾಗಿ ಮರು ವಿಂಗಡಣೆ ಮಾಡಲಾಗಿದೆ.

ವಾಯುಗುಣ:- ಬೆಳ್ಳೂರು ಸಮುದ್ರ್ರತ ಮಟ್ಟದಿಂದ ಸುಮಾರು (೭೮೬) 786 ಮೀ ಎತ್ತರದಲ್ಲಿದೆ. ಹಾಗೂ ಎಲ್ಲಾ ಕಾಲದಲ್ಲಿಯೂ ಇಲ್ಲಿನ ಉಷ್ಣಾಂಶ ಮತ್ತು ತೇವಾಂಶ ಹೆಚ್ಚೂ ಅಲ್ಲದೆ ಕಡಿಮೆಯೂ ಅಲ್ಲದೆ ಸಮ ಪ್ರಮಾಣದಲ್ಲಿರುತ್ತದೆ. ಇತ್ತೀಚೆಗೆ ಮಳೆಯ ಪ್ರಮಾಣ ಕಡಿಮೆ ಇದ್ದು ಸರಾಸರಿ ಸುಮಾರು 675 (೬೭೫) ಮಿ.ಮೀ ಮಳೆಯಾಗಿರುತ್ತಿದೆ. ಈ ಊರಿನ ಸುತ್ತಲೂ ಕಲ್ಪವೃಕ್ಷಗಳಿದ್ದು ತಣ್ಣನೆಯ ಗಾಳಿ ಬೀಸುತ್ತದೆ.

ನೀರಾವರಿ :- ಮಳೆ ನೀರನ್ನೇ ಅವಲಂಬಿಸಿ ಕೊಂಡಿದ್ದ ಇಲ್ಲಿನ ಜನ ಅಗತ್ಯ ಪ್ರಮಾಣದ ಆಹಾರ ಪದಾರ್ಥಗಳನ್ನು ಬೆಳೆಯುವಲ್ಲಿ ವಿಫಲರಾಗಿದ್ದರು. ಆದ್ದರಿಂದ ಮಳೆ ನೀರನ್ನು ಸಂಗ್ರಹಿಸುವ ನಿಟ್ಟಿನಲ್ಲಿ ಈ ಊರಿನ ವಾಯುವ್ಯ ಭಾಗದಲ್ಲಿ ಅಲ್ಲಾಳ ಸಮುದ್ರ ಎಂಬ ಕೆರೆಯನ್ನು ಪೆರುಮಳ ದಂಡನಾಯಕನು ನಿರ್ಮಿಸಿದನು. ಇದಕ್ಕೆ ಅವ್ವನ ಕೆರೆ ದಾಸನಕೆರೆ ಎಂಬ ಹೆಸರುಗಳು ಈಗಲೂ ಇವೆ.

ತಿಮ್ಮಣ್ಣನೆಂಬ ದಂಡನಾಯಕನು ನಾಗಮಂಗಲದಲ್ಲಿ ಆಡಳಿತ ನಡಸುತ್ತಿದ್ದ. ಈ ಊರಿನ ನೈರುತ್ಯದಿಕ್ಕಿನಲ್ಲಿ ಒಂದು ಕೆರೆಯನ್ನು ನಿರ್ಮಿಸಲು ಮುಂದಾದ. ಆದರೆ ಕೆರೆಯ ಏರಿ ಭದ್ರವಾಗಿ ನಿಲ್ಲಲಿಲ್ಲ ಹೊಡೆದು ಹೋಗುತ್ತಿತ್ತು. ದಂಡನಾಯಕನಿಗೆ ಚಿಂತೆಯಾಯಿತು. ಒಂದು ರಾತ್ರಿ ಅವನ ಕನಸಿನಲ್ಲಿ ಈ ಕೆರೆಯ ಏರಿ ಭದ್ರವಾಗ ಬೇಕಾದರೆ ನೀನು ಇಟ್ಟು ಕೊಂಡಿರುವ ವೇಶ್ಯೆಯನ್ನು ಬಲಿಕೊಡ ಬೇಕೆಂದು ನುಡಿದಂತಾಯಿತು. ಇದರಿಂದ ದಂಡನಾಯಕ ಆತಂಕಕ್ಕೆ ಒಳಗಾದ. ಈ ವಿಷಯವನ್ನು ತಿಳಿದ ಆ ವೇಶ್ಯೆ ಕೆರೆಗೆ ಆಹುತಿಯಾದಳು. ಅಂದಿನಿಂದ ಆ ಕೆರೆಯನ್ನು ಸೂಳೆಕೆರೆ ಎಂದು ಕರೆಯಲಾಯಿತು. ಆ ಹೆಸರು ಈಗಲೂ ಇದೆ.

ಆ ವೇಶ್ಯೆಯ ತಂಗಿ ನಾನೂ ಇದೇ ರೀತಿಯಲ್ಲಿ ಎಲ್ಲಾದರೂ ಒಂದು ಕೆರೆಗೆ ಆಹುತಿಯಾಗ ಬೇಕೆಂದು ಬೆಳ್ಳೂರಿನ ಕಡೆಗೆ ಬಂದಳು ಅಕ್ಕ ಪಕ್ಕದ ಹಳ್ಳಿಗಳು ಹಾಗೂ ಬೆಳ್ಳೂರಿನವರ ಸಹಾಯದಿಂದ ಒಂದು ಕೆರೆ ನಿರ್ಮಾಣವಾಯಿತು. ಅಲ್ಲಿಯೂ ಸಹಾ ಕೆರೆಯ ಏರಿ ಭದ್ರವಾಗದೆ ನೀರು ನಿಲ್ಲುತ್ತಿರಲಿಲ್ಲ. ಇದರಿಂದ ಆ ವೇಶ್ಯೆ ಚಿಂತಾ ಕ್ರಾಂತಳಾದಳು. ಅದೇ ಮಾರ್ಗದಲ್ಲಿ ಒಬ್ಬ ದಾಸಯ್ಯ ಪ್ರಯಾಣಿಸುತ್ತಿದ್ದ. ಈ ಕೆರೆಯಲ್ಲಿ ನೀರು ನಿಲ್ಲದಿರುವ ವಿಷಯ ಕೇಳಿ ವೇಶ್ಯೆಗೆ ಒಂದು ಉಪಾಯ ಹೇಳಿದ. ನಾನು ಈ ಕೆರೆ ಭದ್ರವಾಗುವಂತೆ ಮಾಡುತ್ತೇನೆಂದು ಪೂರ್ವಾಭಿಮುಖವಾಗಿ ನಿಂತು ತನ್ನ ಶಂಖ ಜಾಗಟೆಯ ಮೂಲಕ ಕೂಗು ಹಾಕಿದ ನಂತರ ಕೆರೆಯ ದುರಸ್ತಿ ಕಾರ್ಯ

ಮುಂದುವರಿಯಿತು. ನೀರು ನಿಲ್ಲುವಂತಾಯಿತು. ಆ ವೇಶ್ಯೆಗೆ ಸಂತೋಷವಾಯಿತು. ಅಂದಿನಿಂದ ಈ ಕೆರೆಯನ್ನೂ ಸೂಳೆ ಕೆರೆ ಎಂದೇ ಕರೆಯಲು ಪ್ರಾರಂಭಿಸಿದರು. ಇವಳ ಕಾಲದಲ್ಲಿ ನಿರ್ಮಿಸಿದ ಕೆರೆಯ ಏರಿಯ ಉಬ್ಬು ಕೆರೆಯ ಮಧ್ಯಬಾಗದಲ್ಲಿಯೇ ಈಗಲೂ ಆ ಉಬ್ಬನ್ನು ಸೂಳೆಕೆರೆ ಏರಿ ಎಂದೇ ಕರೆಯುತ್ತಾರೆ.

ನಂತರ ಬಂದ ಬೆಳ್ಳೂರಿನ ಮಾಂಡಲೀಕರು ಕೆರೆಯನ್ನು ವಿಸ್ತರಿಸಲು ಮುಂದಾದರು. ಮೊದಲಿದ್ದ ಏರಿಯ ಪೂರ್ವಭಾಗಕ್ಕೆ ಸ್ವಲ್ಪದೂರದಲ್ಲಿ ಇನ್ನೊಂದು ಏರಿಯನ್ನು ನಿರ್ಮಿಸಲಾಯಿತು. ಇದಕ್ಕೆ ಮಾಂಡಲೀಕನ ತಾಯಿಯ ಹೆಸರನ್ನಿಡಲಾಯಿತು. ಅದೇ ಅವ್ವನ ಕೆರೆ. ನಂತರ ಬಂದ ಸಾಮಂತರು ಅದನ್ನು ದುರಸ್ಥಿ ಮಾಡಿ ಅಲ್ಲಾಳ ಸಮುದ್ರ ಎಂಬ ಹೆಸರಿನಿಂದ ಕರೆಯಲ್ಪಟ್ಟರು. ಆದರೆ ಈಗ ದಾಸನ ಕೆರೆ ಎಂದು ಕರೆಯುವುದು ವಾಡಿಕೆಯಾಗಿದೆ.

ಮಳೆ ಬೀಳದೆ ಕೆರೆಗೆ ನೀರು ಬಾರದಿದ್ದಾಗ ಪರ್ಜನ್ಯ ಜಪ ಮಾಡಿ ಮಳೆ ಬರಿಸುವ ಯಜ್ಞಮಾಡುತ್ತಿದ್ದರು. ಈ ಕೆಲಸವನ್ನು ಆ ಕೆರೆಗೆ ಬರುತ್ತಿದ್ದ ದನ, ಎಮ್ಮೆ, ಕುರಿಕಾಯುವವರು ತಮ್ಮ ಕೈಲಾದ ಧನಸಹಾಯ ಮಾಡಿ ಬೆಳ್ಳೂರಿನಿಂದ ಜೋಯಿಸರನ್ನು ಕರೆಸಿ ಪೂಜೆ ಸಲ್ಲಿಸುತ್ತಿದ್ದರು. ಪೂಜೆ ಸಲ್ಲಿಸುತ್ತಿದ್ದ ಸ್ಥಳವನ್ನು ಗುಂಡಿರಂಗಪ್ಪನ ಅರೆ ಎಂದೇ ಕರೆಯುತ್ತಾರೆ. ಇದು ಕೆರೆಯ ಮಧ್ಯಭಾಗದಲ್ಲಿದೆ. ಇತ್ತೀಚೆಗೆ ಹೇಮಾವತಿ ಜಲಾಶಯದಿಂದ ನೀರು ಹರಿಯಲಾರಂಬಿಸಿ ಪ್ರತಿ ವರ್ಷ ಕೆರೆ ತುಂಬುತ್ತಿದೆ. ಬೆಳ್ಳೂರಿನ ಜನರಿಗೆ ವ್ಯವಸಾಯಕ್ಕೆ ಮತ್ತು ಕುಡಿಯುವ ನೀರಿಗೆ ಅನುಕೂಲವಾಗಿದೆ.

ದಾಸನ ಕೆರೆಗೆ ಎರಡು ಮಾರ್ಗಗಳಿಂದ ನೀರು ಹರಿದು ಬರುತ್ತದೆ. ೧) ಹರೆಗನಹಳ್ಳಿ ಕೆರೆ, ಬಾಳಗಂಚಿಕೆರೆ, ಹಿರಿಸಾವೆ ಕೆರೆ, ಮತಿಘಟ್ಟ ಕೆರೆಗಳಿಂದ ಬರುವ ನೀರು ೨) ದಡಗ ಕೆರೆ, ಬಿಂಡಿಗನವಿಲೆ ಕೆರೆ, ಹೊನ್ನಾವರದ ಕೆರೆಗಳಿಂದ ನೀರು ಹರಿದು ಬರುತ್ತದೆ.

ಇತ್ತೀಚೆಗೆ ಮಳೆಯ ಪ್ರಮಾಣ ಕಡಿಮೆಯಾಗಿ ಕೆರೆಗಳು ತುಂಬುವುದೇ ಅಪರೂಪವಾಗಿದೆ. ಆದರೆ ನಾಲ್ಕೈದು ವರ್ಷಗಳಿಂದ ಹೇಮಾವತಿ ನೀರನ್ನು ಹೆರಗನಹಳ್ಳಿ ಕೆರೆಯ ಮೂಲಕ ಈ ಕೆರೆಗೆ ಹರಿಸಲಾಗುತ್ತಿದೆ. ಈಗ ವರ್ಷ ಪೂರ್ತಿ ನೀರು ನಿಂತಿರುತ್ತದೆ. ಈ ನೀರಿನಿಂದ ಬೆಳ್ಳೂರಿಗೆ ಕುಡಿಯುವ ನೀರನ್ನು ಸರಬರಾಜು ಮಾಡಲಾಗುತ್ತಿದೆ.

ಬೆಳ್ಳೂರಿನ ಆಗ್ನೇಯ ದಿಕ್ಕನ್ನು ಬಿಟ್ಟು ಉಳಿದ ಎಲ್ಲಾ ಭಾಗಗಳಿಗೆ ನೀರಾವರಿ ಸಂಪರ್ಕವಿದೆ. ಇದರಿಂದ ಪ್ರತಿವರ್ಷ ಬೇಸಿಗೆ ಬೆಳೆಯಾಗಿ ಭತ್ತವನ್ನು ಬೆಳೆಯುತ್ತಾರೆ.

ದಿನಾಂಕ ೨೬/೦೮/೧೮೦೦ ರಲ್ಲಿ ಬ್ರಿಟೀಷ್ ಅಧಿಕಾರಿ ಫ್ರಾನ್ಸಿಸ್ ಬುಕಾನಾನ್ ಬೆಳ್ಳೂರಿಗೆ ಬೇಟಿ ನೀಡಿದ್ದನು ಎಂದು ಮಂಡ್ಯ ಜಿಲ್ಲಾ ಗೆಜೆಟಿಯರ್ ನಲ್ಲಿ ದಾಖಲಿಸಲಾಗಿದೆ.

ಕ್ರಿಶ ೧೮೮೩ ಕ್ಕೆ ಮುನ್ನ ನಾಗಮಂಗಲ ತಾಲ್ಲೂಕು ಹಾಸನ ಜಿಲ್ಲೆಗೆ ಸೇರಿತ್ತು. ನಂತರ ೦೧/೦೭/೧೯೩೯ ಮೈಸೂರು ಜಿಲ್ಲೆಯಲ್ಲಿದ್ದ ಮಂಡ್ಯಭಾಗವನ್ನು ಬೇರ್ಪಡಿಸಿ ಜಿಲ್ಲೆಯನ್ನಾಗಿ ಮಾಡಲಾಯಿತು. ಆಗ ನಾಗಮಂಗಲ ತಾಲ್ಲೋಕನ್ನು ಮಂಡ್ಯ ಜಿಲ್ಲೆಗೆ ಸೇರಿಸಲಾಯಿತು.

## ವೀರವೈಷ್ಣವ ನದಿ:-

ಇದು ಬೆಳ್ಳೂರಿನ ಉತ್ತರ ಭಾಗದಲ್ಲಿ ಹರಿಯುವ ಜೀವನದಿಯಾಗಿದೆ. ಎಂಥಹ ಬೇಸಿಗೆ ಕಾಲದಲ್ಲಿಯೂ ನೀರರಿಯುತ್ತದೆ. ಇದರ ಉಗಮ ಸ್ಥಾನ ತುಮಕೂರು ಜಿಲ್ಲೆಯ ತುರುವೇಕೆರೆ ತಾಲ್ಲೂಕು ಇಲ್ಲಿ ಉಗಮವಾದ ನದಿಗೆ ನಾಗಮಂಗಲ ತಾಲ್ಲೂಕಿನಲ್ಲಿ ಮಣಿಯೂರು, ತಿಗಳನಹಳ್ಳಿ ಯಲ್ಲಿ ಕೆರೆಗಳನ್ನು ನಿರ್ಮಿಸಲಾಗಿದೆ. ತಿಗಳನಹಳ್ಳಿ ಕೆರೆಯಿಂದ ಹರಿದು ಬಂದ ನೀರು ಮುಂದೆ ದಾಸನಕೆರೆಯಿಂದ ಬರುವ ನೀರಿನ ಜೊತೆ ಸಂಗಮವಾಗುತ್ತದೆ. ಮುದಿಗೆರೆ ಕೆರೆಯಿಂದ ಬರುವ ನೀರು ಇದೇ ನದಿಗೆ ಸೇರಿ ಅಲ್ಲಿಂದ ವೀರವೈಷ್ಣವ ನದಿ ಎಂದು ಹೆಸರು ಪಡೆದು ಕೊಂಡಿದೆ. ಪೂರ್ವಾಭಿಮುಖವಾಗಿ ನಂತರ ದಕ್ಷಿಣಾಭಿಮುಖವಾಗಿ ಹರಿದು ಮಾರ್ಕೋನಹಳ್ಳಿ ಡ್ಯಾಂ ಮೂಲಕ ಶಿಂಷಾನದಿ ಸೇರುತ್ತದೆ. ಆ ಶಿಂಷಾನದಿ ಮುಂದೆ ಕಾವೇರಿ ನದಿಯನ್ನು ಸೇರುತ್ತದೆ. ಈಗ್ಗೆ ವೀರ ವೈಷ್ಣವನದಿ ಬೆಳ್ಳೂರು ಜನರಿಗೆ ಪಾವನ ನದಿಯಾಗಿದೆ.

## ಬೆಳೆಗಳು:-

ಪ್ರಧಾನವಾಗಿ ಸಾಂಪ್ರದಾಯಿಕವಾದ ಬೇಸಾಯ ಪದ್ದತಿಯನ್ನು ಅನುಸರಿಸಿಕೊಂಡು ಬಂದಿರುವ ಪ್ರದೇಶ ಇಲ್ಲಿನ ಬೆಳೆಗಳನ್ನು ಪ್ರಮುಖವಾಗಿ ಎರಡು ಗುಂಪುಗಳಾಗಿ ವಿಂಗಡಿಸಬಹುದು.

೧. ಖುಷ್ಕಿ ಬೇಸಾಯದ ಬೆಳೆಗಳು

೨. ತರಿ ಬೇಸಾಯದ ಬೆಳೆಗಳು

ಖುಷ್ಕಿ ಬೇಸಾಯದ ಬೆಳೆಗಳು :- ಮಳೆಯಾದಾರಿತ ಒಣ ಬೇಸಾಯ ಪದ್ದತಿಯನ್ನು ಖುಷ್ಕಿ ಬೇಸಾಯ ಎನ್ನುತ್ತಾರೆ. ಈ ಪದ್ದತಿಯಲ್ಲಿ ಮುಖ್ಯ ಬೆಳೆಯನ್ನಾಗಿ ರಾಗಿ, ಜೋಳ ಬೆಳೆಯುತ್ತಾರೆ. ಮಿಶ್ರ ಬೆಳೆಗಳಾಗಿ ಅವರೆ, ಹುರಳಿ, ಹುಚ್ಚೆಳ್ಳು, ಜೋಳ, ತೊಗರಿ ಬೆಳೆಯುತ್ತಾರೆ. ಇತ್ತೀಚೆಗೆ ಹೈನುಗಾರಿಕೆ ಹೆಚ್ಚೆಚ್ಚವಾಗಿ ಬೆಳೆದಿದ್ದು ಪಶುಗಳು ಆಹಾರಕ್ಕಾಗಿ ಹುಲ್ಲಿನ ಬೆಳೆಗಳನ್ನು ಹೆಚ್ಚಾಗಿ ಬೆಳೆಯುತ್ತಾರೆ.

ತರಿಬೇಸಾಯ:- ಮಳೆ ನೀರನ್ನು ಕೆರೆಗಳಲ್ಲಿ ಸಂಗ್ರಹಿಸಿ ಬೇಸಾಯ ಮಾಡುವುದಕ್ಕೆ ತರಿ ಬೇಸಾಯ ಎನ್ನುತ್ತಾರೆ. ಕೆಲವು ವರ್ಷಗಳಿಂದ ಮಳೆಯ ಪ್ರಮಾಣ ಕಡಿಮೆಯಾಗಿ ದಾಸನ ಕೆರೆ ತುಂಬುವುದೆ ಅಪರೂಪವಾಗಿದೆ. ಆದರೆ ಹೇಮಾವತಿ ಜಲಾಶಯದ ನೀರಿನಿಂದ ಪ್ರತಿ ವರ್ಷ ಭರ್ತಿಯಾಗುತ್ತಿದೆ. ಈ ನೀರಿನಿಂದ ಬೇಸಿಗೆ ಬೆಳೆಯಾಗಿ ಭತ್ತ ಹಾಗೂ ಅಲ್ಪ ಪ್ರಮಾಣದಲ್ಲಿ ಕಬ್ಬನ್ನು ಬೆಳೆಯುತ್ತಾರೆ.

ವಾಣಿಜ್ಯ ಬೆಳೆಗಳು:-

ಆಧುನಿಕ ಕೃಷಿ ಕ್ಷೇತ್ರದಲ್ಲಿ ಬದಲಾವಣೆ ಉಂಟಾಗಿ ಹೊಸದಾಗಿ ಚಾಲನೆಯುಂಟಾಗಿ ಆರ್ಥಿಕವಾಗಿ ಕೃಷಿಯನ್ನು ಸದೃಡಗೊಳಿಸುವುದು ಇದರ ಉದ್ದೇಶವಾಗಿದೆ. ಮಳೆಯ ಪ್ರಮಾಣ ಕಡಿಮೆಯಾದಂತೆ ಕೊಳವೆ ಬಾವಿಗಳ ಬದಲಿ ವ್ಯವಸ್ಥೆ ಹೆಚ್ಚಾಗಿದೆ. ಈ ಊರಿನ ಸುತ್ತ ಮುತ್ತಲೂ ತೆಂಗಿನ ಮರಗಳೇ ಹೆಚ್ಚಾಗಿವೆ. ಇದೇ ಇಲ್ಲಿನ ಆರ್ಥಿಕ ಬೆಳೆಯಾಗಿದೆ.

ಉಪಕಸುಬುಗಳು:-

ಕೃಷಿಯಿಂದ ಹಣದ ಅಗತ್ಯವನ್ನು ಪೂರೈಸಿಕೊಳ್ಳಲಾರದ ರೈತನಿಗೆ ಆಧುನಿಕವಾಗಿ ಉಪಕಸುಬುಗಳಿಂದ ಹಣಗಳಿಸುವ ವಿಧಾನವಾಗಿದೆ. ಹಸುಸಾಕಾಣಿಕೆ, ಕುರಿಸಾಕಾಣಿಕೆ, ಕೋಳಿಸಾಕಾಣಿಕೆ, ಹಂದಿಸಾಕಾಣಿಕೆ, ಮೀನು ಸಾಕಾಣಿಕೆಗಳು ರೈತನ ಉಪಕಸುಬುಗಳಾಗಿವೆ. ಇವುಗಳಿಗೆ ಇಲ್ಲಿನ ಸ್ಥಳಿಯ ಬ್ಯಾಂಕುಗಳು ಸಾಲ ನೀಡುವುದರ ಮೂಲಕ ಶಕ್ತಿ ತುಂಬುತ್ತಿವೆ.

ಗೃಹಕೈಗಾರಿಕೆಗಳು:-

ಸ್ವಾತಂತ್ರ್ಯ ಪೂರ್ವದಲ್ಲಿ ಗೃಹ ಕೈಗಾರಿಕೆಗಳು ಜನರ ಜೀವನವನ್ನು ಸುಧಾರಿಸುತ್ತಿದ್ದವು. ಇದಕ್ಕೆ ಮಹಾತ್ಮ ಗಾಂಧೀಜಿಯವರ ಪ್ರೇರಣೆ ಪ್ರೋತ್ಸಾಹ ಅನನ್ಯವಾಗಿತ್ತು. ಆದರೆ ಇಂಗ್ಲೆಂಡಿನ ಕೈಗಾರೀಕರಣಕ್ಕೆ ಸಿಲುಕಿದ ಭಾರತದ ಗೃಹ ಕೈಗಾರಿಕೆಗಳು ತತ್ತರಿಸಿ ಹೋದವು. ಇದಕ್ಕೆ ಒಳಗಾದ ಈ ಊರಿನ ಕೈ ಮಗ್ಗದ ಕೈಗಾರಿಕೆಗಳು ಇಂದು ನಶಿಸಿ ಹೋಗಿವೆ. ಇವುಗಳನ್ನೇ ಅವಲಂಬಿಸಿಕೊಂಡಿದ್ದ ಜನ ಇಂದು ಬೇರೆ ಬೇರೆ ವ್ಯಾಪಾರ ವ್ಯವಹಾರದಲ್ಲಿ ತೊಡಗಿಸಿಕೊಂಡಿದ್ದಾರೆ. ಈಗಲೂ ಮಗ್ಗದ ಬೀದಿ ಎಂಬ ಹೆಸರಿನ ಒಂದು ಬೀದಿ ಇದೆ. ಇದಲ್ಲದೆ ಜಿನಿವಾರಿಕೆ, ಕಮ್ಮಾರಿಕೆ, ಕುಂಬಾರಿಕೆ, ಮರಗೆಲಸ.

## ಸಾರಿಗೆ ಸಂಪರ್ಕ:-

ಬೆಂಗಳೂರಿನಿಂದ ೧೦೦ ಕಿ.ಮೀ ಮೈಸೂರಿನಿಂದ ೭೦ಕಿ.ಮೀ ತುಮಕೂರಿನಿಂದ ೬೦ ಕಿ.ಮೀ ಅಂತರದಲ್ಲಿ ಈ ಊರಿದೆ. ಬೆಂಗಳೂರು – ಮಂಗಳೂರು ರಾಷ್ಟ್ರೀಯ ಹೆದ್ದಾರಿ ೪೮ ಕ್ಕೆ ಸೇರಿದಂತಿರುವುದರಿಂದ ದಿನದ ೨೪ ಗಂಟೆಗಳೂ ಸಾರಿಗೆ ಸಂಪರ್ಕದ ಕೇಂದ್ರವಾಗಿದೆ. ಈ ಊರು ಒಂದು ವ್ಯಾಪಾರ ಕೇಂದ್ರವಾಗಿದರುವುದರಿಂದ ಬೆಂಗಳೂರಿನಿಂದ ವಸ್ತುಗಳು ದಿನೇ ದಿನೇ ಸರಬರಾಜಾಗುತ್ತವೆ. ಹತ್ತಿರದಲ್ಲೇ ಇರುವ ಶ್ರೀ ಆದಿಚುಂಚನಗಿರಿ ಕ್ಷೇತ್ರಕ್ಕೆ ಈ ಊರಿನ ಮೂಲಕವೇ ಹಾಗು ಹೋಗಬೇಕಾಗಿರುವುದರಿಂದ ಸಾರಗೆ ಸಂಪರ್ಕದ ಸೌಲಭ್ಯ ಉತ್ತಮವಾಗಿದೆ.

## ಬೆಳ್ಳೂರಿನ ಅಂಕಿ ಅಂಶಗಳು

| | | |
|---|---|---|
| ೧. ಬೆಳ್ಳೂರಿನ ಒಟ್ಟು ವಿಸ್ತೀರ್ಣ | - | |
| ೨. ಜನ ಸಂಖ್ಯೆ | - | ೬೬೫೦( ೨೦೦೧ ಜನಗಣತಿಯಂತೆ) |
| ೩. ಕುಟುಂಬಗಳು | - | ೨೫೯೬ |
| ೪. ರೇಷನ್ ಕಾರ್ಡಗಳು | - | ೨೨೯೬ |
| ಅ) ಬಿ.ಪಿ.ಎಲ್ | - | ೯೭೭ |
| ಆ) ಏ.ಪಿ.ಎಲ್ | - | ೧೩೧೯ |
| ೫. ಅಂಗನವಾಡಿ ಕೇಂದ್ರಗಳು | - | ೦೬ |
| ೬. ಕಿ. ಪ್ರಾಥಮಿಕ ಶಾಲೆಗಳು | - | ೦೬ |
| ೭. ಹಿ. ಪ್ರಾಥಮಿಕ ಶಾಲೆಗಳು | - | ೦೨ |
| ೮. ಪ್ರಾಢಶಾಲೆಗಳು | - | ೦೨ |
| ೯. ಜೂನಿಯರ್ ಕಾಲೇಜು | - | ೦೧ |
| ೧೦. ಆಸ್ಪತ್ರೆ | - | ೦೧ |
| ೧೧. ಪಶುವೈದ್ಯ ಆಸ್ಪತ್ರೆ | - | ೦೧ |
| ೧೨. ಪೋಲೀಸ್ ಸ್ಟೇಷನ್ | - | ೦೧ |
| ೧೩. ಪೋಸ್ಟಾಫೀಸು | - | ೦೧ |
| ೧೪. ಚಿಕಿತ್ಸಾಲಯಗಳು | - | ೦೫ |
| ೧೫. ಮಾತ್ರೆ ಅಂಗಡಿಗಳು | - | ೦೫ |
| ೧೬. ಕೆನರಾ ಬ್ಯಾಂಕ್ | - | ೦೧ |
| ೧೭. ಎಂ.ಡಿ.ಸಿ.ಸಿ. ಬ್ಯಾಂಕ್ | - | ೦೧ |
| ೧೮. ವ್ಯವಸಾಯ ಸೇವ ಸಹಕಾರ ಸಂಸ್ಥೆ | - | ೦೧ |
| ೧೯. ರೇತ್ರ ಮಿತ್ರ ಕೇಂದ್ರ | - | ೦೧ |
| ೨೦. ಹಿಂದೂ ದೇವಾಲಯಗಳು | - | ೨೦ |
| ೨೧. ಮಸೀದಿಗಳು | - | ೦೫ |
| ೨೨. ಬಸದಿ | - | ೦೧ |

೨೩. ರೈಸ್ ಮಿಲ್ ಗಳು - ೦೨
೨೪. ಹಲ್ಲರ್ & ಪ್ಲೋರ್ ಮಿಲ್ - ೦೪
೨೫. ಕೊಬ್ಬರಿ ಅಂಗಡಿಗಳು - ೧೦
೨೬. ಬಟ್ಟೆ ಅಂಗಡಿಗಳು - ೧೫
೨೭. ಹೋಟೆಲ್ ಗಳು - ೦೫
೨೮. ದಿನಸಿ ಅಂಗಡಿಗಳು - ೧೫
೨೯. ಪಾತ್ರೆ ಅಂಗಡಿಗಳು - ೦೪
೩೦. ಬೇಕರಿಗಳು - ೦೮
೩೧. ಮಧ್ಯದಂಗಡಿಗಳು - ೦೩
೩೨. ಸಾಮಿಲ್ ಗಳು (ಮರ ಕುಯ್ಯುವ) - ೦೩
೩೩. ನಾಡಕಛೇರಿ - ೦೧
೩೪. ಟೆಲಿಫೋನ್ ಆಫೀಸು - ೦೧
೩೫. ಬಸ್ ಸ್ಟಾಂಡ್ - ೦೧
೩೬. ಸೊಸೈಟಿ - ೦೨
೩೭. ರಸಗೊಬ್ಬರದ ಅಂಗಡಿ - ೦೫
೩೮. ಸಂತೆ ಮೈಧಾನ - ೦೧
೩೯. ಗ್ರಾಮ ಪಂಚಾಯಿತಿ ಆಫೀಸು - ೦೧
೪೦. ಗ್ಯಾಸ್ ಏಜೆನ್ಸಿ - ೦೧
೪೧. ನೆಮ್ಮದಿ ಕೇಂದ್ರ - ೦೧
೪೨. ಪ್ರಿಂಟಿಂಗ್ ಪ್ರೆಸ್ - ೦೬
೪೩. ಕಂಪ್ಯೂಟರ್ ಕಲಿಕಾ ಕೇಂದ್ರ - ೦೨
೪೪. ಬ್ರೌಸಿಂಗ್ ಸೆಂಟರ್ - ೦೨

## ಅಧ್ಯಾಯ – ೨

### ಶ್ರೀ ಆದಿಚುಂಚನಗಿರಿ ಕ್ಷೇತ್ರದ ಪ್ರಭಾವ:-

ದಕ್ಕಿಣ ಭಾರತದಲ್ಲಿ ಶೈವಧರ್ಮದ ಆದಪೀಠವೆನಿಸಿರುವುದು ಶ್ರೀ ಆದಿಚುಂಚನಗಿರಿ. ಇದು ಕರ್ನಾಟಕದಲ್ಲಿಯೇ ಒಂದು ಪವಿತ್ರ ಕ್ಷೇತ್ರವೆನಿಸಿದೆ. ಬೆಳ್ಳೂರಿಗೆ ಸುಮಾರು ಐದೂವರೆ ಕಿ.ಮೀ ದೂರದಲ್ಲಿದೆ. ಸುಮಾರು ಒಂದು ನೂರು ಕೋಟಿ ರೂ ವೆಚ್ಚದಲ್ಲಿ ನಿರ್ಮಿಸಿರುವ ಕಾಲಭೈರವೇಶ್ವರ ದೇವಾಲಯ ಆಕಾಶದೆತ್ತರಕ್ಕೆ ತಲೆ ಎತ್ತಿ ನಿಂತಿದೆ. ಇದರ ನಿರ್ಮಾಣಕ್ಕೆ ಅವಿರತ ಪ್ರಯತ್ನಕರಾಗಿ ನಿಂತವರು ಶ್ರೀ ಶ್ರೀ ಶ್ರೀ ಭಾಲಗಂಗಾಧರನಾಥ ಸ್ವಾಮೀಜಿಯವರು. ಇವರು ೧೯೭೨ ರಲ್ಲಿ ೭೨ ನೇ ಪೀಠಾಧ್ಯಕ್ಷರಾಗಿ ನೇಮಕಗೊಂಡ ನಂತರ ಶ್ರೀ ಕ್ಷೇತ್ರ ಧಾರ್ಮಿಕವಾಗಿ, ಶೈಕ್ಷಣಿಕವಾಗಿ ಅಭಿವೃದ್ದಿಯತ್ತ ಸಾಗಿದೆ. ಶ್ರೀ ಕ್ಷೇತ್ರದಲ್ಲಿ ಐದು ಸಾವಿರ ವಿದ್ಯಾರ್ಥಿಗಳಿಗೆ ಉಚಿತ ಶಿಕ್ಷಣವನ್ನು ನೀಡುತ್ತಿದೆ. ಬೆಳ್ಳೂರು ಮತ್ತು ಅದರ ಸುತ್ತ ಮುತ್ತಲ ಹಳ್ಳಿಗಳ ಮಕ್ಕಳು ಇಂದು ಉಚಿತ ವಿಧ್ಯಾಭ್ಯಾಸವನ್ನು ಪಡೆಯುತ್ತಿದ್ದಾರೆ. ಬೆಳ್ಳೂರಿಗೆ ಸೇರಿದ ಹಾಗೆ ಬಿ.ಜಿ.ನಗರ ಇದೆ. ಇದೊಂದು ವಿಶ್ವವಿದ್ಯಾ ನಿಲಯ ಮಟ್ಟಕ್ಕೆ ಏರುವ ಸ್ಥಾನವನ್ನು ಪಡೆದಿದೆ. ಇಲ್ಲಿ ಎಲ್.ಕೆ.ಜಿ ಯಿಂದ ಪಿ.ಯು.ಸಿ, ಎಂಜಿನಿಯರಿಂಗ್, ನರ್ಸಿಂಗ್, ಮೆಡಿಕಲ್ ಕಾಲೇಜು, ಆದಿಚುಂಚನಗಿರಿ ಆಸ್ಪತ್ರೆ ಮತ್ತು ಸಂಶೋಧನಾ ಕೇಂದ್ರ ಇದೆ.

ಗ್ರಾಮೀಣ ಪ್ರದೇಶದಲ್ಲಿ ಇಂತಹ ಉನ್ನತ ಮಟ್ಟದ ಶಿಕ್ಷಣ ಸಂಸ್ಥೆ ಮತ್ತು ಆಸ್ಪತ್ರೆ ತೆರೆದಿರುವುದು ಈ ಭಾಗದ ಜನರ ಪುಣ್ಯ. ಈ ಶಿಕ್ಷಣ ಸಂಸ್ಥೆಯಲ್ಲಿ ಕೆಲಸ ಮಾಡುವ ಶಿಕ್ಷಕ ಹಾಗೂ ನೌಕರ ವರ್ಗದವರಿಗೆ ಬೆಳ್ಳೂರಿನಲ್ಲಿ ವಸತಿ ನಿಲಯ ನಿರ್ಮಿಸಲಾಗಿದೆ. ಬಿ.ಜಿ.ನಗರದಲ್ಲಿ ಇಂದು ಸುಮಾರು ೮ ರಿಂದ ೧೦ ಸಾವಿರ ವಿಧ್ಯಾರ್ಥಿಗಳು ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಇಷ್ಟೂ ವಿಧ್ಯಾರ್ಥಿಗಳು ವ್ಯಾಪಾರ ವ್ಯವಹಾರಕ್ಕೆ ಬೆಳ್ಳೂರನ್ನು ಅವಲಂಬಿಸ ಬೇಕಾಗಿದೆ. ಆದ್ದರಿಂದ ಬೆಳ್ಳೂರು ಒಂದು ವ್ಯಾಪಾರ ಕೇಂದ್ರವಾಗಿ ಮಾರ್ಪಟ್ಟಿದೆ. ಮಂಡ್ಯ ಜಿಲ್ಲೆಯಲ್ಲಿಯೇ ಆರ್ಥಿಕವಾಗಿ ವೇಗವಾಗಿ ಬೆಳೆಯುತ್ತಿರುವ ಹೋಬಳಿ ಕೇಂದ್ರವಾಗಿದೆ. ಇಷ್ಟೊಂದು ವೇಗವಾಗಿ ಅಭಿವೃದ್ಧಿ ಹೊಂದಬೇಕಾದರೆ ಶ್ರೀ ಕ್ಷೇತ್ರದ ಪ್ರಭಾವ ಹೆಚ್ಚಾಗಿದೆ. ಬೆಳ್ಳೂರಿನಲ್ಲಿ ಹಿಂದು, ಮುಸ್ಲಿಂ, ಜೈನಧರ್ಮಗಳಿವೆ. ಈ ಮೂರು ಧರ್ಮಗಳ ಸಮನ್ವಯ ಉತ್ತಮವಾಗಿದೆ. ಶ್ರೀ ಕ್ಷೇತ್ರದ ಪ್ರಭಾವ ಈ ಮೂರು ಧರ್ಮಗಳ ಮೇಲೆ ಪ್ರಭಾವ ಬೀರಿದೆ. ಸರ್ವ ಧರ್ಮ ಸಹಬಾಳ್ವೆಗೆ ಶ್ರೀ ಮಠ

ಸಹಕಾರಿಯಾಗಿದೆ. ಗ್ರಾಮೀಣ ಪ್ರದೇಶದಲ್ಲಿ ೫೦೦ ಹಾಸಿಗೆಗಳಷ್ಟು ಸಿಸಜ್ಜಿತವಾದ ಶ್ರೀ ಆದಿಚುಂಚನಗಿರಿ ಆಷ್ಪತ್ರೆ ಮತ್ತು ಸಂಶೋಧನಾ ಕೇಂದ್ರವಿದೆ. ಇದರಲ್ಲಿ ನಗರ ಪ್ರದೇಶದಲ್ಲಿರುವ ಎಲ್ಲಾ ರೀತಿಯ ಸೌಲಭ್ಯವಿದೆ. ಬೆಳ್ಳೂರು ಮತ್ತು ಅದರ ಸುತ್ತ ಮುತ್ತಲ ಪ್ರದೇಶದವರಿಗೆ ಇಂದು ಕೈಗೆಟಕುವ ರೀತಿಯಲ್ಲಿ ಆಸ್ಪತ್ರೆಯ ಸೌಲಭ್ಯ ದೊರೆಯುತ್ತಿದೆ. ಶ್ರೀ ಕ್ಷೇತ್ರ ಶೈಕ್ಷಣಿಕ, ಧಾರ್ಮಿಕ, ಸಾಮಾಜಿಕ ಹಾಗೂ ಆರೋಗ್ಯ ಕ್ಷೇತ್ರದ ಪ್ರಭಾವ ಬೆಳ್ಳೂರಿನ ಮೇಲೆ ಅಧಿಕವಾಗಿದೆ.

# ಅಧ್ಯಾಯ – ೪

## ಐತಿಹಾಸಿಕ ನೆಲೆಗಳು:-

ಪ್ರತಿಯೊಂದು ವಸ್ತು, ವಿಷಯ, ಪ್ರದೇಶಕ್ಕೂ ತನ್ನದೇ ಆದ ಒಂದು ಇತಿಹಾಸವಿರುತ್ತದೆ. ಇಂತಹ ಗತಕಾಲದ ಪರಂಪರೆಯನ್ನು ತಿಳಿಯುವಿದರ ಮೂಲಕ ಬದುಕನ್ನು ಪುನರಾವರ್ತನೆ ಮಾಡುತ್ತ ವಿಷಯವನ್ನು ತಿಳಿಸುವುದಾಗಿದೆ. ಈ ಮೂಲಕ ವರ್ತಮಾನದಮತ್ತು ಭವಿಷತ್ತುಗಳಿಗೆ ಒಂದು ರೀತಿಯ ಮಾರ್ಗದರ್ಶನ ಮತ್ತು ಎಚ್ಚರಿಕೆಗಳನ್ನು ಮೂಡಿಸಿ ಬದುಕನ್ನು ನಿರಂತರ ಗೊಳಿಸುವುದು ಚರಿತ್ರೆಯ ಬಹು ಮುಖ್ಯ ಕೆಲಸ. ಈ ದೃಷ್ಟಿಯಿಂದ ಚರಿತ್ರೆಯನ್ನು ಕಟ್ಟಿಕೊಳ್ಳುವುದಕ್ಕೆ ಅಧಿಕೃತ ದಾಖಲೆಗಳು ವಿವರಗಳು ದೊರೆಯದೇ ಹೋದಾಗ ಲಭ್ಯವಿರುವ ಪೂರಕ ಸಾಮಗ್ರಿಗಳು ಮತ್ತು ಸಂದರ್ಭಗಳನ್ನು ಗಮನಿಸಸುವುದು ಅವಶ್ಯಕ. ಜನ ಜೀವನದಲ್ಲಿ ಪ್ರಚಲಿತವಿರುವ ಐಹ್ಯಗಳು, ಶಾಸನಗಳು, ವೀರಗಲ್ಲುಗಳು, ನಿಸಿದ್ದಿಗಲ್ಲುಗಳು ಮುಂತಾದವುಗಳು ಇತಿಹಾಸವನ್ನು ರೂಪಿಸಬೇಕಾಗಿರುತ್ತದೆ. ಪ್ರಸ್ತುತ ಬೆಳ್ಳೂರಿನ ಸಾಂಸ್ಕೃತಿಕ ಇತಿಹಾಸವನ್ನು ತಿಳಿಯುವುದು ಅಗತ್ಯವಾಗಿರುವುದರಿಂದ ಸ್ಥಳೀಯ ಇತಿಹಾಸವನ್ನು ಎರಡು ನೆಲೆಗಳಲ್ಲಿ ನೋಡಬಹುದಾಗಿದೆ.

೧. ರಾಜಕೀಯ ಇತಿಹಾಸ

೨. ಸಾಂಸ್ಕೃತಿಕ ಇತಿಹಾಸ

೧. ರಾಜಕೀಯ ಇತಿಹಾಸ

ಭಾರತದ ಇತಿಹಾಸದಲ್ಲಿ ರಾಜಕೀಯ ಇತಿಹಾಸವೇ ಪ್ರಧಾನವಾಗಿ ಆವರಿಸಿಕೊಂಡಿದೆ. ಸಾಮ್ರಾಟರು, ಚಕ್ರಾಧಿಪತಿಗಳು, ರಾಜಮಹಾರಾಜರು, ಅದೀನ ಸಾಮಂತರು, ಪಾಳೆಗಾರರು ಮುಂತಾದವರು ತಮ್ಮ ಅನುಕೂಲಕ್ಕೆ ತಕ್ಕಂತೆ ರಾಜ್ಯಬಾರ ಮಾಡಿ ತಮ್ಮ ವೈಭವಗಳನ್ನು ಮೆರೆದಿದ್ದಾರೆ. ಇಂತಹವರ ಹೋರಾಟಗಳು ಆಡಳಿತ ವಿಧಾನಗಳು ಅನುಸರಿಸುತ್ತಿದ್ದ ಉಪಾಯಗಳು ನಿರ್ಮಿಸಿದ ಕೋಟೆ ಕೊತ್ತಲಗಳು ದೇವಾಲಯಗಳು ತಿಳಿಯುವುದಾಗಿದೆ.

## ೧. ಹೋಯ್ಸಳರು:-

ಮಧ್ಯಕಾಲೀನ ಕರ್ನಾಟಕದ ಇತಿಹಾಸದಲ್ಲಿ ಹೊಯ್ಸಳಯುಗ ಒಂದು ಪ್ರಜ್ವಲವಾದ ಅಧ್ಯಾಯವಾಗಿದೆ. ಹೋಯ್ಸಳ ದೊರೆಗಳು ವಾಸ್ತು ಶಿಲ್ಪಕ್ಕೆ ನೀಡಿದ ವಿಶೇಷ ಕೊಡುಗೆಗಳಿಂದಾಗಿ ಈ ವಂಶವು ಭಾರತದ ಇತಿಹಾದಲ್ಲಿ ಚಿರಸ್ಥಾಯಿಯಾಗಿ ಉಳಿದಿದೆ. ಇವರು ಕನ್ನಡಿಗರಿಗೆ ಉತ್ತಮ ಆಡಳಿತವನ್ನು ಕೊಟ್ಟಿದ್ದಲ್ಲದೆ ಅನೇಕ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಸುಮಾರು ತೊಂಭತ್ತು ದೇವಾಲಯಗಳಯ ಬೆಳಕಿಗೆ ಬಂದಿವೆ. ಅವುಗಳಲ್ಲಿ ಬೇಲೂರು, ಹಳೇಬೀಡು, ಸೋಮನಾಥಪುರದ ದೇವಾಲಯಗಳು ಜಗತ್ಪ್ರಸಿದ್ಧವಾದವುಗಳು. ಅನೇಕ ದೇವಾಲಯಗಳು ಬೆಳಕಿಗೆ ಬಾರದೆ ಪೂಜೆ ಪುರಸ್ಕಾರವಿಲ್ಲದೆ ಅನಾಥವಾಗಿ ಬಿದ್ದಿವೆ. ಮಂಡ್ಯ ಜಿಲ್ಲೆಯಲ್ಲಿಯೂ ಹೊಯ್ಸಳರ ಕಾಲಕ್ಕೆ ಸೇರಿದ ಅನೇಕ ದೇವಾಲಯಗಳಿವೆ. ಅವುಗಳಲ್ಲಿ ನಾಗಮಂಗಲದ ಸೌಮ್ಯ ಕೇಶವದೇವಾಲಯ, ಬೆಳ್ಳೂರಿನ ಆಧಿಮಾದವರಾಯ ಸ್ವಾಮಿ ದೇವಾಲಯ, ಬಿಂಡಿಗನವಿಲೆಯ ಚನ್ನಕೇಶವ ದೇವಾಲಯ ಮುಖ್ಯವಾದವುಗಳು.

ಹೊಯ್ಸಳರ ದೊರೆ ಮೂರನೆಯ ನರಸಿಂಹನ ಕಾಲದಲ್ಲಿ ಈ ಊರು ಮಹಾಪ್ರಧಾನ ಪೆರುಮಾಳ ದೇವ ದಂಡನಾಯಕನ ಆಳ್ವಿಕೆಗೆ ಒಳಪಟ್ಟಿತ್ತು. ಈತನ ಆಳ್ವಿಕೆಯ ಕ್ರಿ.ಶ ೧೨೮೪ ರಲ್ಲಿ ನಿರ್ಮಿಸಲಾಯಿತೆಂದು ಶಾಸನದ ಪ್ರಕಾರ ತಿಳಿಸಲಾಗಿದೆ.

ಹೋಯ್ಸಳರ ದೊರೆ ಮೂರನೆಯ ನರಸಿಂಹನ ಕಾಲದಲ್ಲಿ ಬೆಟ್ಟದ ಕೋಟೆ, ಬಿಲ್ಲಬೆಳಗುಂದ, ತಿಪ್ಪೂರು ಹಾಗೂ ಇತರ ಊರುಗಳು ಉಪಗ್ರಾಮಗಳಾಗಿದ್ದವು. ಈ ಪ್ರದೇಶಕ್ಕೆ ಸಂಬಂದಿಸಿದಂತೆ ಅನುಸರಿಸುತ್ತಿದ್ದ ರಾಜಕೀಯ ಉಪಾಯಗಳನ್ನು ತಿಳಿಯಬಹುದಾಗಿದೆ.

## ವಿಜಯ ನಗರದ ಅರಸರು:-

ವಿಜಯ ನಗರದ ಸಾಮ್ರಾಜ್ಯದ ಅರಸು ಮನೆತನಗಳಿಗೆ ಸೇರಿದ ಸುಮಾರು ೨೦ ಶಾಸನಗಳು ಮಂಡ್ಯ ಜಿಲ್ಲೆಯಲ್ಲಿ ಕಂಡು ಬರುತ್ತವೆ. ಬೆಳ್ಳೂರಿನ ಅಗ್ರಹಾರಕ್ಕೆ ಸೇರಿದ ಬೀಚನಹಳ್ಳಿಯ ವೀರಗಲ್ಲೊಂದರ ಮೇಲಿನ ಶಾಸನವೇ ಅತ್ಯಂತ ಪ್ರಾಚೀನವಾದುದು. ಕ್ರಿ.ಶ.

೧೩೪೧ ಮೇ ೨ ರಂದು ಬರೆಸಿರುವ ಶಾಸನವಾಗಿದೆ. ಒಂದನೆಯ ಹರಿಹರನು ಆಳುತ್ತಿದ್ದನು ಎಂದು ತಿಳಿಸುತ್ತದೆ. ಬುಕ್ಕನು ತನ್ನ ಅಣ್ಣನಿಗೆ ಆಡಳಿತದಲ್ಲಿ ನೆರವಾಗುತ್ತಿದ್ದನೆಂದು ತಿಳಿಯಬಹುದಾಗಿದೆ.

ಮಹಾಮಂಡಲೇಶ್ವರ ಸಾಳದ ನರಸಿಂಗರಾಜವೊಡೆಯನ ಮನೆಯ ಪ್ರಧಾನ ವಿರೂಪಾಕ್ಷದೇವ ಅಣ್ಣನು ಆರಣಿ ಸ್ಥಳಕ್ಕೆ ಸೇರಿದ ಚುಂಚನಹಳ್ಳಿ ಗ್ರಾಮಕ್ಕೆ ವಿರೂಪಾಕ್ಷಪುರವೆಂದು ಹಚುಂಚನ ಭೈರದೇವರಿಗೆ ಧಾನ ನೀಡಿದ ಎಂದು ತಿಳಿದು ಬರುತ್ತದೆ. ವಿಜಯನಗರ ಸಾಮ್ರಾಜ್ಯ ಬೆಳ್ಳೂರಿನ ಇತಿಹಾಸದ ಮೇಲೆ ಪ್ರಭಾವ  ಬೀರದಿದ್ದರೂ ಅಕ್ಕಪಕ್ಕದ ಸ್ಥಳಗಳಲ್ಲಿ ಪ್ರಭಾವ ಬೀರಿದ ಉಲ್ಲೇಖಗಳಿವೆ.

## ಮೈಸೂರಿನ ಒಡೆಯರು:-

ಬೆಳ್ಳೂರು ಕ್ರಿ.ಶ. ೧೩೪೨ ರ ವೇಳೆಗೆ ಮೈಸೂರು ಸಂಸ್ಥನದ ಹಿಡಿತಕ್ಕೆ ಬಂದಿತ್ತು. ದೆವರಾಜಹೊಡೆಯರು ಬೆಳ್ಳೂರಿನಲ್ಲಿ ವಿಮಲನಾಥ ದೇವಾಲಯ ನಿರ್ಮಿಸಲು ಭೂಧಾನ ಮಾಡಿದರೆಂದು ತಿಳಿದು ಬಂದಿದೆ, ಬೆಳ್ಳೂರಿನ ಪ್ರಸನ್ನ ದೇವಾಲಯದಲ್ಲಿ ಐಂದ್ರ ಪರ್ವ ಮತ್ತು ಆರಣ ಪೂಜೆಗಳನ್ನು ನಡೆಸಲು ಬೇಕಾದ ಖರ್ಚು ವೆಚ್ಚಕ್ಕಾಗಿ ಭೂಮಿಯನ್ನು ದತ್ತಿ ನೀಡಿದರೆಂದು ತಿಳಿಲಾಗಿದೆ.

## ಸಾಮಾಜಿಕ ಜೀವನ:-

ಸಾಮಾಜಿಕಸಂಘಟನೆ ಸಂಸ್ಕೃತಿಯ ಒಂದು ಅಂಗ ಕುಟುಂಬ ಎಂಬುದು ಸಮಾಜದ ಕನಿಷ್ಟ ಘಟಕ. ಕುಟುಂಬ ವ್ಯವಸ್ಥೆ ಇಲ್ಲಿ ಸದಸ್ಯರಿಂದ ರೂಪಿತವಾಗಿದೆ. ಇಲ್ಲಿ ಪ್ರಮುಖವಾಗಿ ಮೂರು ಧರ್ಮಗಳಿದ್ದು ಸಹಬಾಳ್ವೆಯ ಜೀವನ ಸಾಗಿಸುತ್ತಿವೆ. ಹಿಂದು, ಮುಸ್ಲಿಂ, ಜೈನಧರ್ಮಗಳು ಒಬ್ಬರಿಗೊಬ್ಬರು ಸಹಾಯ ಸಹಕಾರದೊಂದಿಗೆ ಜೀವನ ನಡೆಸುತ್ತಿದ್ದಾರೆ. ಹಿಂದೂಗಳು ಮೂಲವಾಸಿಗಳು ಇವರು ಎಲ್ಲಿಂದ ಬಂದರು ಎಂಬುದು ತಿಳಿದು ಬರುವುದಿಲ್ಲ. ಹಿಂದೂಗಳಲ್ಲಿ ಅನೇಕ ಜಾತಿ ಜನಾಂಗಗಳು ಈ ಊರಿನ ಸಾಮಾಜಿಕ ಘಟಕಗಳಾಗಿವೆ.

ಹಿಂದೂಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಹರಿಜನರೆ ಹೆಚ್ಚಾಗಿದ್ದಾರೆ. ಇವರು ಎಲ್ಲಾ ಧರ್ಮಗಳ ಸಹಕಾರದೊಂದಿಗೆ ತಮ್ಮದೇ ಆದ ಕೆಲಸ ಕಾರ್ಯಗಳನ್ನು ಮಾಡುವುದರ ಮೂಲಕ ಬೆಳ್ಳೂರಿನ ಭದ್ರ ಭುನಾದಿಗಳಾಗಿದ್ದಾರೆ. ಇವರ ನಂತರ ಮಗ್ಗದ ಶೆಟ್ಟರು ಬರುತ್ತಾರೆ. ಇವರು ಬೆಳ್ಳೂರಿನ

ಗರಹಕೈಗಾರಿಕೆಗಳನ್ನು ಸ್ಥಾಪಿಸಿದವರಲ್ಲಿ ಮೊದಲಿಗರು. ಇವರ ಮುಖ್ಯ ಕಸುಬು ಮಗ್ಗದಿಂದ ಬಟ್ಟೆ ತಯಾರಿಸುವುದು. ಆದರೆ ಕೈಗಾರಿಕರಣದಿಂದ ಗೃಹ ಕೈಗಾರಿಕೆಗಳು ನಶಿಸಿಹೋದವು ಈಗ ಅವರು ವ್ಯವಸಾಯ, ವ್ಯಾಪಾರ, ವಾಣಿಜ್ಯ ವನ್ನು ಅವಲಂಬಿಸಿದ್ದಾರೆ.

ದಾಸನಕೆರೆ, ವೀರ ವೈಷ್ಣವನದಿಯಲ್ಲಿ ಮೀನುಗಳನ್ನು ಹಿಡಿದು ಮಾರುಕಟ್ಟೆಗೆ ತರುವುದು ಬೆಸ್ತರ ಕೆಲಸ ಈಗಲೂ ಕೆಲವರು ಇದೇ ವೃತ್ತಿಯನ್ನು ಅವಲಂಬಿಸಿ ಕೊಂಡಿದ್ದಾರೆ.

ವ್ಯವಸಾಯವನ್ನೇ ಪ್ರಧಾನ ಕಸುಬಾಗಿಸಿಕೊಂಡಿರುವ ಒಕ್ಕಲಿಗರು ಅಲ್ಪ ಪ್ರಮಾಣದಲ್ಲಿದ್ದಾರೆ. ತೆಂಗು, ಬಾಳೆ, ಅಡಿಕೆ, ಭತ್ತ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಅಲ್ಲಾಳ ಸಮುದ್ರದ ಕೆಳ ಭಾಗದಲ್ಲಿರುವ ಗದ್ದೆಗಳನ್ನು ಗುತ್ತಿಗೆ ಪಡೆದು ವ್ಯವಸಾಯ ಮಾಡುವುದು ಇವರ ಕಸುಬು.

ಬೆಳ್ಳೂರು ಜಿನಿವಾರಕ್ಕೆ ಹೆಸರುವಾಸಿಯಾದ ಊರು. ಚಿನ್ನ, ಬೆಳ್ಳಿ, ತಾಂಮ್ರ, ಕಂಚು ಮುಂತಾದ ಲೋಹಗಳಿಂದ ಆಭರಣ, ಪಾತ್ರೆ ಪಗಡೆಗಳನ್ನು ತಯಾರಿಸುವ ಆಚಾರಿ ವರ್ಗದವರಿದ್ದಾರೆ.

ಮಡಿವಂತಿಕೆಗೆ ಹೆಸರಾದವರು ಮಡಿವಾಳರು. ಇವರು ವೀರವೈಷ್ಣವ ನದಿಯಲ್ಲಿ ಬಟ್ಟೆಯನ್ನು ತೊಳೆದು ಒಣಗಿಸಿ ಅವುಗಳನ್ನು ಇಸ್ತ್ರಿ ಮಾಡಿ ಅದರ ವಾರಸು ದಾರರಿಗೆ ಕೊಡುವವರು. ವೀರ ವೈಷ್ಣವ ನದಿಯನ್ನು ಈಗಲೂ ಅಗಸಹೊಳೆ ಎಂದೇ ಕರೆಯುವ ಪ್ರತಿತಿ ಇದೆ,

ಬಳೆಗಾರರು, ಮಾರವಾಡಿಗಳು, ಕಮ್ಮಾರರು, ಚಮ್ಮಾರರು, ಮಾದಿಗರು ಇನ್ನೂ ಮುಂತಾದ ಜನಾಂಗ ಹಿಂದೂ ಧರ್ಮದ ಘಟಕಗಳಾಗಿವೆ.

ಆದಿ ಮಾದವರಾಯ ಸ್ವಾಮಿಯ ಆರಾಧಕರು ಜೋಯಸ ಪದ್ದತಿಯನ್ನು ವೃತ್ತಿಯನ್ನಾಗಿ ಮಾಡಿ ಕೊಂಡಿದ್ದ ಬ್ರಾಹ್ಮಣರು ತಮ್ಮದೇ ಆದ ವೈಶಿಷ್ಟ್ಯತೆಯನ್ನು ಹೊಂದಿದ್ದಾರೆ. ಊರಿನ ಉತ್ಸವಗಳಲ್ಲಿ ಕಷ್ಟ ಸುಖಗಳಲ್ಲಿ ಜೋಯಿಸ ಪದ್ದತಿಯಲ್ಲಿ ಹೆಸರಾದವರಿದ್ದಾರೆ. ಹೆಚ್ಚು ಅಕ್ಷರಸ್ಥರನ್ನು ಹೊಂದಿರುವ ಸಮಾಜವಾಗಿದೆ. ಕನ್ನಡ ಕಣ್ವ ಬಿ.ಎಂ.ಶ್ರೀ ಬೆಳ್ಳುರು ಸಹೋದರಿಯರು ಈ ವರ್ಗಕ್ಕೆ ಸೇರಿದವರಾಗಿದ್ದಾರೆ. ಸುತ್ತ ಮುತ್ತಲ ಹಳ್ಳಿಗಳಲ್ಲಿ ಜೋಯಿಸ ಪದ್ದತಿಯಲ್ಲಿ ತೊಡಗಿದ್ದವರು ಇಂದು ಕೆಲವರು ವ್ಯಾಪಾರದ ಕಡೆ ಗಮನ ಹರಿಸಿದ್ದಾರೆ.

ಹಿಂದೂ ಮುಸ್ಲಿಂ ರ ಐಕ್ಯತೆಗೆ ಹೆಸರಾದ ಊರು ಬೆಳ್ಳೂರು. ಉತ್ತರ ಭಾರತದಿಂದ ದಕ್ಷಿಣ ಭಾರತದ ಕಡೆಗೆ ಬಂದು ನೆಲೆಸಿದ ಮುಸಲ್ಮಾನರು ಬೆಳ್ಳೂರಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಇವರೆಲ್ಲ ವ್ಯಾಪಾರದ ಕಡೆಗೆ ಹೆಚ್ಚು ಗಮನ ಹರಿಸಿದ್ದಾರೆ. ವ್ಯವಸಾಯ ಮಾಡುವುವರ ಸಂಖ್ಯೆ ಕಡಿಮೆ. ಇತ್ತೀಚೆಗೆ ಅಕ್ಷರಸ್ಥರ ಸಂಖ್ಯೆ ಹೆಚ್ಚಾಗಿ ವಿವಧ ಹುದ್ದೆಗಳನ್ನು ಅವಲಂಬಿಸಿ ಕೊಂಡಿದ್ದಾರೆ.

ಮಾಗಡಿ ತಾಲ್ಲೂಕಿನ ಶಂಕಿಘಟ್ಟದಿಂದ ವ್ಯಾಪಾರಕ್ಕಾಗಿ ಬಂದವರು ಜೈನ ಸಮುದಾಯದವರು. ಇಲ್ಲಿನ ಭೌಗೋಳಿಕವಾಗಿ ಪರಿಸರ ಅವರನ್ನು ಆಕರ್ಷಿಸಿ ಇಲ್ಲಿಯೇ ನೆಲೆಸುವಂತೆ ಮಾಡಿದೆ. ಹದಿನೇಳನೇ ತೀರ್ಥಂಕರನಾದ ವಿಮಲನಾಥ ಬಸದಿಯನ್ನು ನಿರ್ಮಿಸಿಕೊಂಡಿದ್ದಾರೆ. ಪ್ರಸಿದ್ಧ ಜೈನ ಕ್ಷೇತ್ರವಾದ ಶ್ರವಣಬೆಳಗೊಳಕ್ಕೆ ಬರುವ ಜೈನ ಮುನಿಗಳೆಲ್ಲ ಇಲ್ಲಿ ಕೆಲವು ದಿನ ಉಳಿದು ಮಾರನೇ ದಿನ ಪ್ರಯಾಣ ಮುಂದುವರಿಸುವುರು. ಇದಕ್ಕೆ ಬೇಕಾದ ಎಲ್ಲಾ ವ್ಯವಸ್ಥೆಗಳನ್ನು ಮತ ಭೇದವಿಲ್ಲದೆ ಬೆಳ್ಳೂರಿನ ಮಹಾಜನಗಳು ಅವರ ಕೈಕಂರ್ಯದಲ್ಲಿ ತೊಡಗುತ್ತಾರೆ. ಇಲ್ಲಿನ ವಿಶೇಷವೆಂದರೆ ಪ್ರತಿಯೊಂದು ಧರ್ಮ, ಜಾತಿ, ಉಪಜಾತಿಗಳು ತಮ್ಮದೇ ಆದ ಬೀದಿಗಳನ್ನು ಹೊಂದಿದ್ದಾರೆ.

ಎಲ್ಲಾ ಧರ್ಮದವರು ಸರ್ವಧರ್ಮ ಸಹಬಾಳ್ವೆಯನ್ನು ಕಲಿತಿದ್ದಾರೆ. ಹಿಂದುಗಳ ಎಲ್ಲಮ್ಮ, ಚಿಕ್ಕಮ್ಮ, ದೊಡ್ಡಮ್ಮ ಹಬ್ಬಗಳು ಮುಸಲ್ಮಾನರ ರಂಜಾನ್, ಈದ್ ಮಿಲಾದ್, ಬಾಬಯ್ಯನ ಹಬ್ಬಗಳು ಜೈನರ ಮಹಾವೀರ ಜಯಂತಿ ಹಬ್ಬಗಳಂದು ಎಲ್ಲರೂ ಸೌಹಾರ್ದಯುತವಾಗಿ ಪಾಲ್ಗೊಂಡು ಆಚರಿಸುತ್ತಾರೆ.

ಮೈಸೂರು ಮಹಾರಾಜರ ಆಳ್ವಿಕೆಗೆ ಒಳಪಟ್ಟಿದ್ದ ಸಂದರ್ಭದಲ್ಲಿ ಬೆಳ್ಳೂರಿನಲ್ಲಿ ಕೆಲವು ಅಭಿವೃದ್ಧಿ ಕಾರ್ಯಗಳು ನಡೆದವು. ಕುಡಿಯುವ ನೀರಿಗಾಗಿ ಬಾವಿ ತೋಡಿಸಲಾಯಿತಯ. ಮೈಸೂರಿನಿಂದ ಬೆಳ್ಳೂರು ಮಾರ್ಗವಾಗಿ ತುಮಕೂರಿಗೆ ಹೋಗುವ ರಸ್ತೆಯನ್ನು ಅಭಿವೃದ್ಧಿ ಪಡಿಸಲಾಯಿತು. ಬೆಳ್ಳೂರಿನಲ್ಲಿ ವಿಮಲನಾಥ ಬಸದಿ ನಿರ್ಮಿಸಲು ಬೇಕಾದ ಸ್ಥಳವನ್ನು ದಾನ ಮಾಡುವುದರ ಮೂಲಕ ನೀಡಿದರು.

ಮಹಾರಾಜರ ಆಳ್ವಿಕೆಯ ಕಾಲದಲ್ಲಿ ಸಾಹುಕಾರ್ ಗಂಗಪ್ಪ, ಅಬ್ದುಲ್ ಅಜೀಜ್, ಅಬ್ದುಲ್ ರಸುಲ್ ಸಾಹೇಬರು ಮೈಸೂರು ರಿಜಿಸ್ಲೇಟ್ಯೂ ಅಸೆಂಬ್ಲಿ (ಎಂ.ಆರ್.ಎ) ಮೆಂಬರ್ ಆಗಿದ್ದರು. ಬೆಳ್ಳೂರಿನಲ್ಲಿ ಇವರ ಸೇವಾ ಕೈಂಕರ್ಯವನ್ನು ಗುರುತಿಸಿ ಇವರಿಗೆ ಈ ಪದವಿ ನೀಡಿದ್ದರು.

ಮಹಾರಾಜರ ಪ್ರತಿನಿಧಿಗಳಾಗಿ ಇಲ್ಲಿ ಸಾಕಷ್ಟು ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡರು. ಸಾಹುಕಾರ್ ಗಂಗಪ್ಪನವರ ಉದಾರ ಸೇವೆಯಿಂದ ಸಾರ್ವಜನಿಕ ಆಸ್ಪತ್ರೆಗೆ ಬೇಕಾದ ಕಟ್ಟಡವನ್ನು ತಮ್ಮ ಸ್ವಂತ ಹಣದಲ್ಲಿ ನಿರ್ಮಿಸಿ ಕೊಟ್ಟರು. ಇದರಿಂದ ಸುತ್ತಮುತ್ತಲ ಜನರಿಗೆ ಉಚಿತ ಆರೋಗ್ಯ ಸೇವೆ ದೊರಕುವಂತಾಯಿತು.

ಅಬ್ದುಲ್ ಅಜೀಜ್ ಸಾಹೇಬರು ಬೆಳ್ಳುರು ಪಂಚಾಯಿತಿ ಸದಸ್ಯರಾಗಿ ನಂತರ ಅಧ್ಯಕ್ಷರಾಗಿ ಸಾಕಷ್ಟು ಅಭಿವೃದ್ಧಿ ಕಾರ್ಯ ಕೈಗೊಂಡರು. ಇತ್ತೀಚೆಗೆ ಇವರ ಮಗ ಎಮ್. ಅಬ್ದುಲ್ ಅಲೀಂ ಸಾಹೇಬರು ಮೂರ್ನಾಲ್ಕು ಬಾರಿ ಪುರಸಭೆ ಸದಸ್ಯರಾಗಿ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ. ಅಬ್ದುಲ್ ರಸುಲ್ ಸಾಹೇಬರು ಉಂಡೆ ನಸ್ಯೆ ತಯಾರಿಸುವಲ್ಲಿ ಪ್ರಸಿದ್ಧರು. ಇವರು ತಯಾರಿಸುತ್ತಿದ್ದ ನಸ್ಯೆಗೆ ಎಲ್ಲಿಲ್ಲದ ಬೇಡಿಕೆ ಇತ್ತು. ಇವರೂ ಸಹ ಬೆಳ್ಳೂರಿನ ಅಭಿವೃದ್ಧಿಗೆ ಸಾಕಷ್ಟು ಗಮನ ಹರಿಸಿದ್ದರು.

ಬೆಳ್ಳೂರಿನಿಂದ ಪ್ರತಿ ನಿದಿಸಿದಷ್ಟು ಈ ಮೂರು ಜನ ಸದಸ್ಯರು ಮೈಸೂರಿನ ದಸರ ಹಬ್ಬದ ಸಂದರ್ಭದಲ್ಲಿ ಸುಮಾರು ಒಂದು ತಿಂಗಳ ಕಾಲ ಸೇವೆಸಲ್ಲಿಸುತ್ತಿದ್ದರು. ಅಲ್ಲಿಗೆ ಬರುತ್ತಿದ್ದ ಪ್ರತಿಯೊಬ್ಬ ಎಂ.ಆರ್.ಎ. ಸದಸ್ಯರಿಗೆ ತಂಗಲು ಮನೆ, ತಿರುಗಾಡಲು ಕುದುರೆಗಾಡಿ ಕೊಡುತ್ತಿದ್ದರು. ದಸರ ಹಬ್ಬದ ವ್ಯವಸ್ಥೆಯನ್ನು ನೋಡಿ ಕೊಳ್ಳುವ ಜವಬ್ದಾರಿ ಹೊರುತ್ತಿದ್ದರು. ಈ ರೀತಿ ತಮ್ಮ ಸೇವೆ ಸಲ್ಲಿಸಿ ಮಹಾರಾಜರಿಂದ ಅಬಿನಂದನೆಗೆ ಒಳಗಾಗುತ್ತಿದ್ದರು.

ಬೆಳ್ಳೂರಿನಲ್ಲಿ ಉತ್ತಮ ಶಿಕ್ಷಣ ವ್ಯವಸ್ಥೆ ಕಲ್ಪಿಸುವ ದೃಷ್ಟಿಯಿಂದ ಕೆಲವು ವ್ಯಕ್ತಿಗಳು ಶಾಲಾ ಕಾಲೇಜುಗಳ ಕಟ್ಟಡ ನಿರ್ಮಿಸಿಕೊಟ್ಟರು. ಸಾಹುಕಾರ್ ಗಂಗಪ್ಪನವರು ಪ್ರಾಥಮಿಕ ಶಾಲಾ ಕಟ್ಟಡ ನಿರ್ಮಿಸಿಕೊಟ್ಟರು. ಪ್ರೌಢಶಾಲಾ ಕಟ್ಟಡವನ್ನು ಅಣಕನಹಳ್ಳಿ ಲಕ್ಕಣ್ಣಗೌಡ ಕೆಂಪೇಗೌಡ ಎಂಬುವರು ನಿರ್ಮಿಸಿ ಕೊಟ್ಟರು. ಇವರು ಬೆಳ್ಳೂರು ಹೋಬಳಿ ಅಣಕನಹಳ್ಳಿಯವರು. ಇವರು ಇಂಗ್ಲೀಷರ ಕಾಲದಲ್ಲಿ ಊಟಿಗೆ ಹೋಗಿ ನೆಲಸಿದರು. ಅಲ್ಲಿ ವ್ಯವಾಯ ಹಾಗೂ ವ್ಯಾಪಾರದ ಮೂಲಕ ಆರ್ಥಿಕವಾಗಿ ಸ್ಥಿತಿವಂತರಾದರು. ತಮ್ಮ ಸೇವೆ ನಮ್ಮ ನಾಡಿನಲ್ಲಿಯೇ ಆಗಬೇಕೆಂದು ತಿಳಿದು ಬೆಳ್ಳುರಿನಲ್ಲಿ ಪ್ರೌಢಶಾಲೆಗೆ ಕಟ್ಟಡ ಕಟ್ಟಿಸಿ ಕೊಟ್ಟರು. ಅದರ ಹೆಸರು ಎ.ಎಲ್.ಕೆ. ಪ್ರೌಢಶಾಲೆ ಎಂದು ಕರೆಯುತ್ತಿದ್ದರು. ಕೆಲವು ವರ್ಷಗಳ ಹಿಂದೆ ಅಲ್ಲಿ ಜೂನಿಯರ್ ಕಾಲೇಜು ಪ್ರಾರಂಭವಾಯಿತು. ಈಗಲೂ ಅದನ್ನು ಎ.ಎಲ್.ಕೆ. ಸರ್ಕಾರಿ ಜೂನಿಯರ್ ಕಾಲೇಜೆಂದು

ರೆಯಲಾಗುತ್ತಿದೆ. ಈ ಶಾಲಾ ಕಾಲೇಜಿನಲ್ಲಿ ಶಿಕ್ಷಣ ಪಡೆದ ಅನೇಕ ವಿದ್ಯಾರ್ಥಿಗಳು ಇಂದು ಸಮಾಜದಲ್ಲಿ ಅಧಿಕಾರಿಗಳಾಗಿ ಗಣ್ಯವ್ಯಕ್ತಿಗಳಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ವಸುದೇವ ಜೈನ್ ಎಂಬ ಸಮಾಜ ಸೇವಕರು ತಮ್ಮ ಮಾತಾ ಪಿತೃಗಳಾದ ರತಿದೇವಮ್ಮ ಶಾಂತರಾಜರ ಹೆಸರಿನಲ್ಲಿ ಬಾಲಕಿಯರ ಪ್ರೌಢಶಾಲೆಗೆ ಬೇಕಾದ ಕಟ್ಟಡವನ್ನು ನಿರ್ಮಿಸಿ ಕೊಟ್ಟಿದ್ದಾರೆ.

ಆರ್ಥಿಕ ಜೀವನ :-

ಪ್ರತಿಯೊಂದು ಧರ್ಮದವರೂ ಪ್ರತಿಯೊಬ್ಬ ವ್ಯಕ್ತಿಯೂ ತಮ್ಮದೇ ಆದ ಜೀವನೋಪಾಯಗಳನ್ನು ರೂಪಿಸಿ ಕೊಂಡು ಆರ್ಥಿಕವಾಗಿ ಬಲಿಷ್ಠರಾಗಬೇಕು ಆದ್ದರಿಂದ ಹಿದಿನಿಂದ ಬಂದ ತಮ್ಮ ತಮ್ಮ ವೃತ್ತಿಗಳನ್ನು ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಎಲ್ಲಾ ಧರ್ಮದವರಿಗೂ ವ್ಯವಸಾಯವೇ ಪ್ರಧಾನ ಕಸುಬಾಗಿದೆ. ಆದರೆ ಇತ್ತೀಚೆಗೆ ಮಳೆಯ ಪ್ರಮಾಣ ಕಡಿಮೆಯಾದ್ದರಿಂದ ವಿವಧ ವ್ಯಾಪಾರ ಉಪಕಸುಬುಗಳನ್ನು ಅವಲಂಬಿಸಿ ಕೊಂಡಿದ್ದಾರೆ.

ಇತ್ತೀಚೆಗೆ ಕೆಲವರು ತಮ್ಮ ಮೂಲ ಉದ್ಯೋಗಗಳನ್ನು ಬಿಟ್ಟು ಹೋಟೆಲ್, ದಿನಸಿ ಅಂಗಡಿ, ಬಟ್ಟೆ ಅಂಗಡಿ, ಚಿಲ್ಲರೆ ಅಂಗಡಿ, ಗೊಬ್ಬರ ಅಂಗಡಿ, ಔಷದಿ ಅಂಗಡಿ, ಕೊಬ್ಬರಿ ಮಂಡಿಗಳು, ಕಬ್ಬಿಣದ ಅಂಗಡಿ, ಚಿನ್ನ ಬೆಳ್ಳಿ ತಯಾರಿಕೆ, ಗ್ಯಾರೇಜ್ ಮುಂತಾದ ಕಸುಬುಗಳು ತಲೆ ಎತ್ತಿವೆ.

ಉಪಕಸುಬುಗಳು :-

ಕೋಳಿಸಾಕಾಣಿಕೆ, ಕುರಿಸಾಕಾಣಿಕೆ, ಹೈನುಗಾರಿಕೆ, ಇಟ್ಟಿಗೆ ತಯಾರಿಕೆ, ಬೀಡಿ ಕಟ್ಟುವುದು, ಗಂಧದ ಕಡ್ಡಿ ತಯಾರಿಕೆ ಮುಂತಾದವುಗಳು ಉಪಕಸುಬುಗಳಾಗಿವೆ.

## ಿ ಗ್ರಂಥಸ್ಥ ಸಾಹಿತ್ಯ :- ಆಚಾರ್ಯ ಪುರುಷ ಬಿ.ಎಂ.ಶ್ರೀಕಂಠಯ್ಯ

ಕರ್ನಾಟಕದ ಹಿಂದೆ ಬ್ರಿಟಿಷರ ಅಧೀನದಲ್ಲಿದ್ದಾಗ ಆಡಳಿತದ ಸೌಕರ್ಯಕ್ಕೆ ಅವರು ಹಲವಾರು ವಿಭಾಗಗಳಾಗಿ ಹಂಚಿದ್ದರು. ಹೀಗೆ ಮಾಡಿದಾಗ ಬೇರೆ ಬೇರೆಯವರ ಆಡಳಿತಕ್ಕೆ ಒಳಗಾಗಿ ಕನ್ನಡಿಗರು ಹರಿದು ಹಂಚಿಹೋದರು. ಕನ್ನಡತನ ಕಳೆದು ಕೊಂಡರು. ಕನ್ನಡವನ್ನು ಮನೆಮಾತಾಗಿ ಆಡಲು ಹಿಂಜರಿದರು. ಇಂಗ್ಲಿಷ್ ಆಡಳಿತ ಭಾಷೆಯಾಯಿತು. ಕನ್ನಡ ಭಾಷೆ ಅನಾಥವಾಯಿತು. ತಬ್ಬಲಿಯಾಗಿದ್ದ ಕನ್ನಡ ಕೂಸನ್ನು ರಕ್ಷಿಸಿದ ದೀಮಂತರೆಂದರೆ ಬಿ.ಎಂ.ಶ್ರೀ.

ಮಾಸ್ತಿಯವರು ಶ್ರೀಯವರನ್ನು ಕನ್ನಡದ ಕಣ್ವರೆಂದು ಕರೆದರು. ಕಣ್ವರು ಒಬ್ಬ ಮಹಾಋಷಿ. ತಬ್ಬಲಿಯಾಗಿ ಬಿದ್ದಿದ್ದ ಒಂದು ಮಗುವನ್ನು ಪೋಷಿಸಿದರು. ಮಹಾಭಾರತದ ಕಥೆಯಲ್ಲಿ ಒಂದು ಉಪಕಥೆ ಇದೆ ವಿಶ್ವಾಮಿತ್ರ ಮತ್ತು ಮೇನಕೆಯವರಿಗೆ ಜನಿಸಿದ ಮಗುವನ್ನು ಕಾಡಿನಲ್ಲಿ ಬಿಟ್ಟು ಹೊರಟು ಹೋದರು. ಕಾಡಿನ ಎರಡು ಪಕ್ಷಿಗಳು ಅನಾಥ ಶಿಶುವಿಗೆ ರೆಕ್ಕೆಯಿಂದ ಗಾಳಿ ಬೀಸುತ್ತಿದ್ದರವು. ಆಹಾರವನ್ನು ತಂದು ಕೊಡುತ್ತಿದ್ದವು. ಆದರೂ ಮಗು ಅಳು ನಿಲ್ಲಿಸಲಿಲ್ಲ. ಅದೇ ಮಾರ್ಗದಲ್ಲಿ ಬರುತ್ತಿದ್ದ ಕಣ್ವರ ಮನಸ್ಸು ಕರಗಿತು. ಕೂಡಲೆ ಮಗುವನ್ನು ಎತ್ತಿಕೊಂಡು ಆಶ್ರಮಕ್ಕೆ ಬಂದರು. ಆ ಮಗುವಿಗೆ ಶಕುಂತಲಾ ಎಂದು ಹೆಸರಿಟ್ಟರು. ಶಕುಂತ ಅಂದರೆ ಪಕ್ಷಿಗಳಿಂದ ಲಾಲನೆ ಪಾಲನೆ ಪಡೆದವಳು ಎಂದು ಅನಾಥವಾಗಿದ್ದ ಶಿಶುವಿಗೆ ಕಣ್ವರು ಸಾಕು ತಂದೆಯಾದರು. ಶಕುಂತಲೆಯ ಸ್ಥಿತಿಯೇ ಕನ್ನಡಕ್ಕೆ ಬಂದಿತ್ತು. ಕಣ್ವ ಋಷಿ ಶಕುಂತಲೆಯನ್ನು ಸಾಕಿದಂತೆ ಶ್ರೀಕಂಠಯ್ಯನವರು ಕನ್ನಡದ ಪೋಷಕರಾದರು. ಇವರು ಕನ್ನಡದ ಅಡಿಗಲ್ಲು.

" ಏರಿಸಿ ಹಾರಿಸಿ ಕನ್ನಡದ ಬಾವುಟ
ಓಹೋ ಕನ್ನಡ ನಾಡು, ಆಹಾ ಕನ್ನಡ ನುಡಿ;
ಹಾರಿಸಿ, ತೋರಿಸಿ, ಕೆಚ್ಚೆದೆಯ ಬಾವುಟ;
ಬಾಳ್ ಕನ್‌ನಡ ತಾಯ್
ಏಳ್ ಕನ್ನಡ ತಾಯ್
ಆಳ್ ಕನ್ನಡ ತಾಯ್
ಕನ್ನಡಿಗರೊಡತಿ ಓ ರಾಜೇಶ್ವರಿ"
ಎಂಬ ಹಾಡನ್ನು ಕನ್ನಡಿಗರಿಗೆ ಕೊಟ್ಟವರು ಬಿ.ಎಂ.ಶ್ರೀ ಯವರು.

ಬಿ.ಎಂ. ಶ್ರೀ ೧೮೮೪ ಜನವರಿ ೩ ರಂದು ತುಮಕೂರು ಜಿಲ್ಲೆಯ ಸಂಪಿಗೆಯಲ್ಲಿ ಜನಿಸಿದರು. ಸಂಪಿಗೆ ತಾಯಿಯ ತವರು ಮನೆ. ಅವರ ಪೂರ್ಣ ಹೆಸರು ಬೆಳ್ಳೂರು ಮೈಲಾರಯ್ಯ ಶ್ರೀಕಂಠಯ್ಯ ಬಿ.ಎಂ.ಶ್ರೀ ಬೆಳ್ಳೂರು ಹುಟ್ಟೂರು ಎಂದು ಗುರುತಿಸಿಕೊಂಡಿದ್ದಾರೆ. ತಂದೆ ಮೈಲಾರಯ್ಯ ತಾಯಿ ಭಾಗಿರಥಮ್ಮ ನವರು ವಾಸಿಸುತ್ತುದ್ದ ಮನೆ ಬೆಳ್ಳೂರಿನಲ್ಲಿ ಈಗ ಬಿ.ಎಂ.ಶ್ರೀ ಭವನವಾಗಿದೆ.

ಮೈಲಾರಯ್ಯ ಮತ್ತು ಭಾಗೀರಥಮ್ಮ ನವರಿಗೆ ಐದು ಜನ ಮಕ್ಕಳು. ಮೂರು ಗಂಡು ಎರಡು ಹೆಣ್ಣು ಶ್ರೀ ಯವರೇ ಹಿರಿಯ ಮಗ. ತಮ್ಮದಿರಾದ ಕೃಷ್ಣಸ್ವಾಮಿ, ಶಿವರಾಮಯ್ಯ, ತಂಗಿಯರಾದ ಕಾವೇರಮ್ಮ ಮತ್ತು ನಂಜಮ್ಮ.

ತಂದೆ ಬೆಳ್ಳೂರು ಮೈಲಾರಯ್ಯನವರು ನಿಷ್ಠಾವಂತ ವಕೀಲರಾಗಿ ಶ್ರೀರಂಗಪಟ್ಟಣದಲ್ಲಿ ಕೆಲಸ ಮಾಡುತ್ತ ಅಲ್ಲೆ ನೆಲೆಸಿದ್ದರು. ಶ್ರೀ ಯವರ ಬಾಲ್ಯ ಜೀವನ, ಪ್ರಾಥಮಿಕ, ಮಾಧ್ಯಮಿಕ ಶಾಲೆಯ ವಿದ್ಯಾಭ್ಯಾಸ ಇಲ್ಲಿಯೇ ನಡೆಯಿತು.

ಮಂಡ್ಯ ಜಿಲ್ಲೆಯ ಈ ಸ್ವೀಪ ಪ್ರದೇಶ ಶ್ರೀ ಯವರ ಮೇಲೆ ಹೆಚ್ಚು ಪ್ರಭಾವ ಬೀರಿತು. ಬಾಲ್ಯದ ತುಂಟತನ, ಆಟ, ಪಾಠ, ಪ್ರಕೃತಿ ಸೌದರ್ಯ ಇವೆಲ್ಲ ಇವರ ಕವಿಶಕ್ತಿಗೆ ಇಂಬು ನೀಡಿದವು.

ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಮೇಲೆ ಪ್ರೌಢಶಾಲೆಗೆ ಮೈಸೂರಿಗೆ ಹೋಗಬೇಕಾಗಿ ಬಂತು. ಈಗಿನಂತೆ ಆಗ ಮೈಸೂರಿಗೆ ಹೋಗಲು ಬಸ್ಸು, ಕಾರು ವ್ಯವಸ್ಥೆ ಇರಲಿಲ್ಲ. ಶ್ರೀಮಂತರ ಬಳಿ ಮಾತ್ರ ಸಾಗೋಟು ಗಾಡಿ ಇರುತ್ತಿತ್ತು. ಆಗ ಮೈಲಾರಯ್ಯನವರು ಜೋಡೆತ್ತಿನ ಗಾಡಿ ವ್ಯವಸ್ಥೆ ಮಾಡಿ ಮೈಸೂರಿಗೆ ಕಳುಹಿಸಿಕೊಟ್ಟರು. ಜೊತೆಯಲ್ಲಿ ಶ್ರೀ ಯವರ ತಮ್ಮಂದಿರು ಸಹ ಹೋಗುತ್ತಿದ್ದರು.

ಶ್ರೀ ಯವರು ಮೈಸೂರಿನ ಮಹಾರಾಜ ಕಾಲೇಜು, ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಪದವಿ ಪಡೆದರು. ನಂತರ ಉನ್ನತ ವಿದ್ಯಾಭ್ಯಾಸವನ್ನು ಮದರಾಸಿನಲ್ಲಿ ಬಿ.ಎ ನಂತರ ಎಂ.ಎ ಪದವಿ ಪಡೆದು ಮೈಸೂರಿಗೆ ಹಿಂತಿರುಗಿದರು.

ಶ್ರೀ ಯವರಲ್ಲಿದ್ದ ಆಂಗ್ಲ ಸಾಹಿತ್ಯದಲ್ಲಿನ ( ಯಾರು ಆಶ್ಚರ್ಯ ಪಟ್ಟರು ತಿಳಿಸಿ) ಪ್ರತಿಭೆಯನ್ನು ಕಂಡು ಆಶ್ಚರ್ಯಪಟ್ಟರು. ಆಂಗ್ಲ ವಿದ್ವಾಂಸರಾದ ಪ್ರೊ॥ ಮ್ಯಾಕಿಂಟಾಷ್ ಎಂಬ

ಂಗ್ಲ ವಿದ್ವಾಂಸರು ಈ ರೀತಿ ಹೇಳಿದ್ದಾರೆ. "ಶ್ರೀ ಯವರು ಹಿಂದಿನ ಜನ್ಮದಲ್ಲಿ ಆಕ್ಸ್ ಫರ್ಡ್ ವಿಶ್ವ ವಿದ್ಯಾನಿಲಯದ ಆಂಗ್ಲ ಪ್ರೊಫೆಸರರೇ ಆಗಿದ್ದಿರಬೇಕು" ಆಂಗ್ಲ ಸಾಹಿತ್ಯದಲ್ಲಿ ಶ್ರೀ ಯವರಿಗಿದ್ದ ಪಾಂಡಿತ್ಯ ಮತ್ತು ಪ್ರತಿಭೆಯನ್ನು ಕಂಡು ಅವರು ಆಶ್ಚರ್ಯ ಪಟ್ಟರು.

ಶ್ರೀ ಯವರು ಒಂದು ವ್ಯಕ್ತಿಯಲ್ಲ; ಒಂದು ಶಕ್ತಿ ಕನ್ನಡಿಗರಲ್ಲಿ ಸಾಹಿತ್ಯ ಪ್ರೇಮ ಬೆಳೆಯುವಂತೆ ಮಾಡಿದರು. ಕನ್ನಡದ ಕೈಂಕರ್ಯದಲ್ಲಿ ಕನ್ನಡಿಗರು ತೊಡಗುವಂತೆ ಮಾಡಿದರು. 'ಇಂಗ್ಲೀಷ್ ಗೀತೆಗಳು' ಶ್ರೀ ಯವರ ಮೊದಲ ಕವನ ಸಂಕಲನ. ಈ ಕವನ ಸಂಕಲನ ಪ್ರಕಟನೆಯಿಂದ ಸಾಹಿತ್ಯದ ಹೊಸ ಬಾಗಿಲು ತೆರೆಯಿತು. ಈ ಕನ್ನಡ ಪದ್ಯಗಳು ಶ್ರೀ ಯವರಿಗೆ ಉತ್ತೇಜನ ನೀಡಿತು. ಕೆಲವು ಇಂಗ್ಲೀಷ್ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದರು. ಗದಾಯುದ್ಧ, ಅಶ್ವತ್ಥಾಮನ್, ಪಾರಸಿಕರು ನಾಟಕಗಳು ಶ್ರೀ ಯವರನ್ನು ಉತ್ತುಂಗಕ್ಕೆ ಏರಿಸಿದವು.

ಶ್ರೀ ಯವರ ಸೇವೆ ಮಹತ್ತರವಾದುದು. ಕನ್ನಡಿಗರು ಇವರ ಸೇವೆಗೆ ಚಿರಋಣಿ. ಇವರ ಸೇವೆಯನ್ನು ಗುರುತಿಸಿದ ಅಂದಿನ ಮೈಸೂರು ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರು "ರಾಜ ಸೇವಾಸಕ್ತ" ಎಂಬ ಬಿರುದನ್ನು ನೀಡಿ ಗೌರವಿಸಿದರು.

ಶ್ರೀ ಯವರು ಅಧ್ಯಾಪಕ ವೃತ್ತಿಯನ್ನು ಸೇರಿದಾಗ ಇಪ್ಪತ್ತೈದು ವರ್ಷ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಇಂಗ್ಲೀಷ್ ಅದ್ಯಾಪಕರಾಗಿ ಸೇವೆ ಸಲ್ಲಿಸಿದರು. ಅದೇ ಕಾಲೇಜಿನಲ್ಲಿ ಅಸಿಸ್ಟೆಂಟ್ ಪ್ರೊಫೆಸರ್ ಆಗಿ, ಆನಂತರ ಪ್ರೊಫೆಸರ್ ಆದರು ನಂತರ ಮೈಸೂರು ವಿಶ್ವವಿದ್ಯಾಲಯದ ರಿಜಿಸ್ಟ್ರಾರ್ ಹುದ್ದೆಗೆ ಬಡ್ತಿ ಪಡೆದರು. ಇವರ ಕಾಲದಲ್ಲಿ ಕನ್ನಡ ಎಂ.ಎ ತರಗತಿಗಳನ್ನು ಪ್ರಾರಂಬಿಸಿದರು. ಕಥೆ, ಕವನ, ಸಾಹಿತ್ಯ, ನಾಟಕ, ವಿಮರ್ಶೆ ಮುಂತಾದವುಗಳು ಜನ ಸಾಮಾನ್ಯರಿಗೆ ಉಪಯೋಗವಾಗುವಂತೆ ಮಾಡಲು "ಮೈಸೂರು ವಿಶ್ವವಿದ್ಯಾನಿಲಯ ಗ್ರಂಥಮಾಲೆ" ಯನ್ನು ಸ್ಥಾಪಿಸಿದರು. ತಮ್ಮ ಶಿಸ್ಯರಾದ ವಿ. ಸೀತಾರಾಮಯ್ಯ ಕುವೆಂಪು ರವರು ಇವರ ಮಾರ್ಗದರ್ಶನದಲ್ಲಿ ಮುಂದು ವರಿದರು.

೧೯೪೨ ರಲ್ಲಿ ಕೆಲಸದಿಂದ ನಿವೃತ್ತಿಗೊಂಡರು. ನಿವೃತ್ತರಾದ ಮೇಲೆ ಬೆಂಗಳೂರಿನಲ್ಲಿ ನೆಲೆಸಿದರು. ಆದರೆ ಬೆಂಗಳೂರು ಇವರನ್ನು ಹೆಚ್ಚುದಿನ ಇರಿಸಿಕೊಳ್ಳಲಿಲ್ಲ. ಜನರ ಒತ್ತಾಯದ ಮೇರೆಗೆ ಧಾರವಾಡದಲ್ಲಿ ಆಗ ತಾನೇ ಪ್ರಾರಂಬವಾಗಿದ್ದ ಕರ್ನಾಟಕ ಎಜುಕೇಷನ್ ಬೋರ್ಡ್ ಆರ್ಟ್ಸ್ ಕಾಲೇಜಿನಲ್ಲಿ ಪ್ರನ್ಸಿಪಾಲರಾಗಿ ನೇಮಕ ವಾದರು. ಈ ರೀತಿ ಇವರ ಸೇವೆ ನಿವೃತ್ತರಾದ

ಮೇಲೂ ಮುಂದುವರಿಯಿತು. ಇವರು ಕನ್ನಡಿಗರನ್ನು ಸಂತೋಷಪಡಿಸಿದರು. ಆದರೆ ತಾವು ಸಂತೋಷ ಪಡಲಿಲ್ಲ. ಚಿಕ್ಕವಯಸ್ಸಿನಲ್ಲಿಯೇ ಪತ್ನಿಯನ್ನು ಕಳೆದು ಕೊಂಡರು. ಆನಂತರ ತಮ್ಮ ಮಗಳು ಚಿಕ್ಕ ವಯಸ್ಸಿನಲ್ಲಿಯೇ ವಿಧವೆಯಾದಳು. ಈ ಎಲ್ಲಾ ನೋವು ಬೆಟ್ಟದಷ್ಟು.

ಶ್ರೀ ಯವರು ತಮ್ಮ ದುಃಖವನ್ನು ತಾವೇ ನುಂಗಿಕೊಳ್ಳುತ್ತಿದ್ದರು. ಇಂತಹ ವ್ಯಕ್ತಿ ಕನ್ನಡಿಗರನ್ನು ಅನಾಥರನ್ನಾಗಿ ಮಾಡಿ ೧೯೪೬ ಜನವರಿ ಐದರಂದು ಧಾರವಾಡದಲ್ಲಿ ಇಹಲೋಕ ತ್ಯಜಿಸಿದರು. ಕನ್ನಡಿಗರು ಕನ್ನಡದ ಮಾಹಾನ್ ಚೇತನವನ್ನು ಕಳೆದು ಕೊಂಡರು.

ಇಂತಹ ಒಂದು ಚೇತನ ಬೆಳ್ಳೂರಿನಲ್ಲಿ ಜನಿಸಿ ಕನ್ನಡಿಗರ ಹೃದಯ ಗೆದ್ದು ಹೆಸರುಗಳಿಸಿದೆ. ಇವರು ವಾಸಿಸುತ್ತಿದ್ದ ಮನೆ ಬೆಳ್ಳೂರಿನಲ್ಲಿ ಇತ್ತು. ಆದರೆ ಇಂದು ಬಿ.ಎಂ.ಶ್ರೀ ಸ್ಮಾರಕ ಭವನವಾಗಿ ಕಟ್ಟಲ್ಪಟ್ಟಿದೆ. ಇದರಲ್ಲಿ ಈಗ ಸಾಂಸ್ಕೃತಿಕ ಚಟುವಟಿಕೆಗಳು, ಸಭೆ ಸಮಾರಂಭಗಳು ನಡೆಯುತ್ತಿವೆ.

ಶ್ರೀಯವರ ಸಾಧನೆ ಸೇವೆಯನ್ನು ಗಮನಿಸಿದ ಬೆಳ್ಳೂರಿನ ಅಭಿಮಾನಿಗಳು ಹಾಗೂ ಅವರ ಅಚ್ಚು ಮೆಚ್ಚಿನ ಶಿಷ್ಯರಾದ ಪ್ರೊ॥ ಎಂ.ವಿ. ಸೀತಾರಾಮಯ್ಯ ನವರ ಸಹಕಾರದಿಂದ ಬಿ.ಎಂ.ಶ್ರೀ ಶತಮಾನೋತ್ಸವ ಸಮಾರಂಭ ನಡೆಸಲು ತೀರ್ಮಾನಿಸಿದರು. ಜನವರಿ ೩ ೧೯೮೪ (೧೯೮೪ ರಲ್ಲಿ ಆದಿಚುಂಚನಗಿರಿ ಪೀಠಾಧ್ಯಕ್ಷರಾದ ಶ್ರೀ.ಶ್ರೀ.ಶ್ರೀ ಬಾಲಗಂಗಾಧರನಾಥ ಮಹಾ ಸ್ವಾಮೀಜಿಯವರ ಅಧ್ಯಕ್ಷತೆಯಲ್ಲಿ ವಿಜೃಂಭಣೆಯಿಂದ ನಡೆಸಿತು.

ಶ್ರೀ ಯವರ ಬಾಲ್ಯ, ವಿದ್ಯಾಭ್ಯಾಸ, ಸಾಹಿತ್ಯ ಸೇವೆ ಕನ್ನಡ ನುಡಿಯ ಸೇವೆಗಳನ್ನು ತಿಳಿಸಲಾಯಿತು. ಬೆಳ್ಳೂರಿನಲ್ಲಿ ಜನತೆಗೆ ಇದೊಂದು ಅದ್ಭುತವಾದ ಸಮಾರಂಭವಾಯಿತು. ಶ್ರೀ ಯವರನ್ನು ಹತ್ತಿರದಿಂದ ನೋಡದವರಿಗೆ ಅವರ ವಿಷಯವನ್ನು ಕೇಳಿದ ನಂತರ ನೋಡಿದಷ್ಟೇ ಸಂತೋಷವಾಯಿತು. ಅವರು ವಾಸಿಸುತ್ತಿದ್ದ ಹಳೆಯ ಮನೆಯನ್ನು ಕೆಡವಿ ಅದೇ ಜಾಗದಲ್ಲಿ ಅವರ ಹೆಸರಿನಲ್ಲಿ ಒಂದು ಭವನ ನಿರ್ಮಿಸಲು ತೀರ್ಮಾನಿಸಲಾಯಿತು. ಈಗ ಅದು ಒಂದು ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವಾಗಿ ಉಪಯೋಗವಾಗುತ್ತಿದೆ.

ಅಬ್ದುಲ್ ಖಾದರ್ :-

ಬೆಳ್ಳೂರಿನವರೇ ಆದ ಅಬ್ದುಲ್ ಖಾದರ್ ರವರು ಬಿಡಿಗವನಗಳನ್ನು ಗೋಮಾತಗೆ ಸಂಬಂಧಪಟ್ಟಂತೆ ಹಾಡುಗಳನ್ನು ಹಾಗೂ ಚಾಚ ನೆಹರು ರವರನ್ನು ಕುರಿತಂತೆ ಕೆಲವು

ಬಿಡಿಗವನಗಳನ್ನು ರಚಿಸಿದರು. ಅವುಗಳನ್ನು ತಮ್ಮದೇ ಖರ್ಚಿನಲ್ಲಿ ಅಚ್ಚು ಹಾಕಿಸಿ ಊರೂರು ಸುತ್ತಿ ಶಾಲಾ ಕಾಳೇಜುಗಳಲ್ಲಿ ಮಾರಾಟ ಮಾಡುತ್ತಿದ್ದರು. ಅಷ್ಟೇನು ಹೆಸರು ವಾಸಿಯಾಗದಿದ್ದರೂ ಬೆಳ್ಳೂರಿನ ಮಟ್ಟಿಗೆ ಕವಿಯಾಗಿ ಹೆಸರು ವಾಸಿಯಾಗಿದ್ದರು.

ಜೀ.ಶಂ.ಪ :-

ಜೀ.ಶಂ.ಪ ಎಂದೇ ಖ್ಯಾತರಾಗಿದ್ದ ಡಾ॥ಜೀ.ಶಂ ಪರಮಶಿವಯ್ಯ ನವರು ಬೆಳ್ಳೂರಿನ ಪಕ್ಕದ ಅಂಬಲ ಜೀರಹಳ್ಳಿಯವರು. ಜಾನಪದ ಕ್ಷೇತ್ರಕ್ಕೆ ಹೆಸರಾದ ಊರು ಅಂಬಲ ಜೀರಹಳ್ಳಿ. ಸೂತ್ರದಗೊಂಬೆಯಾಟಕ್ಕೆ ಹೆಸರಾದ ಪುಟ್ಟಸ್ವಾಮಾಚಾರ್ಯರನ್ನು ಪ್ರದರ್ಶನವನ್ನು ದೇಶ ವಿದೇಶಗಳಲ್ಲಿ ಪರಿಚಸಿಯಿಸಿದರು. ಪುಟ್ಟಸ್ವಾಮಾಚಾರ್ಯರ ಜೊತೆ ಹಿಮ್ಮೇಳದವರಾಗಿ ಅಂಬಲ ಜೀರಹಳ್ಳಿಯ ಕೆಲವರನ್ನು ಪರಿಚಯಿಸಿದರು. ಜಾನಪದ ಕ್ಷೇತ್ರದಲ್ಲಿ ಹಿರಿದಾದ ಸಾಧನೆ ಮಾಡಿದ ಕೀರ್ತಿ ಇವರದ್ದು. ಮೈಸೂರು ವಿ.ವಿ.ಯಲ್ಲಿ ಜಾನಪದ ವಿಭಾಗಕ್ಕೆ ವಿಶೇಷಸ್ಥಾನ ಮಾನ ಕಲ್ಪಿಸಿ ಕೊಟ್ಟರು. ಅಜ್ಞಾತವಾಗಿದ್ದ ಜಾನಪದ ಕಲಾವಿದರನ್ನು ಹುಡುಕಿ ಬೆಳಕಿಗೆ ತಂದರು. ಬೆ ಳ್ಳೂರಿನ ಸುತ್ತಮುತ್ತಲ ಕಲಾವಿದರನ್ನು ಮೈಸೂರು ದಸರ ಉತ್ಸವದಲ್ಲಿ ಪಾಲ್ಗೊಳಲು ಅವಕಾಶ ಮಾಡಿಕೊಟ್ಟರು. ಈಗಲೂ ಜೀ.ಶಂ.ಪ ರವರನ್ನು ಕಲಾವಿದರು ಸ್ಮರಿಸಿ ಕೊಳ್ಳುತ್ತಾರೆ. ಮೈಸೂರಿನಲ್ಲಿ ಜಾನಪದ ವಸ್ತು ಸಂಗ್ರಹಾಲಯ ಸ್ಥಾಪಿಸಿದಾಗ ಈ ಊರಿನ ಸುತ್ತಮುತ್ತ ಇದ್ದ ಜಾನಪದ ವಸ್ತುಗಳನ್ನು ಕೆಲವು ಐತಿಹಾಸಿಕ ವಸ್ತುಗಳನ್ನು ದಿನಬಳಕೆಯ ವಸ್ತುಗಳನ್ನು ಸಂಗ್ರಹಿಸಿಡಲಾಗಿದೆ. ಇವು ಈಗಲೂ ಇವೆ.

ದಕ್ಷಿಣ ಕರ್ನಾಟಕದ ಜನಪದ ಕಾವ್ಯಪ್ರಕಾರಗಳು ಎಂಬ ಅದ್ಭುತ ಸಂಶೋಧನಾ ಗ್ರಂಥವನ್ನು ಹೊರತಂದರು. ಇಷ್ಟೇ ಅಲ್ದೆ ಸುಮಾರು ಅರವತ್ತಕ್ಕೂ ಹೆಚ್ಚು ಜಾನಪದ ಸಂಬಂಧವಾದ ಕೃತಿಗಳನ್ನು ಸಂಪಾದಿಸಿಕೊಟ್ಟಿರುತ್ತಾರೆ. ಮೈಸೂರು ವಿಶ್ವವಿದ್ಯಾನಿಲಯ ಪ್ರಪ್ರಥಮ ಜಾನಪದ ಪ್ರಾಧ್ಯಾಪಕರಾಗಿ ಆ ಸ್ಥಾನಕ್ಕೆ ಕೀರ್ತಿ ತಂದು ಕೊಟ್ಟಿದ್ದಾರೆ. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಅಧ್ಯಕ್ಷರಾಗಿ ದುಡಿದರು. ಕರ್ನಾಟಕದಲ್ಲಿ ಮೂಡಲಪಾಯ ಯಕ್ಷಗಾನಕ್ಕೆ ಹೊಸ ಜೀವನ ನೀಡಿದರು. 'ದಿಬ್ಬದಾಚೆ' ಕಥಾಕಾವ್ಯ 'ಜೀವನಗೀತೆ' ಕವನ ಸಂಕಲನ ಕಾವಲುಗಾರ ಮತ್ತು ಇತರ ಕಥೆಗಳೂ, ಮಬ್ಬುಜಾರಿದ

ಕಣಿವೆಯಲ್ಲಿ ಕಥಾ ಸಂಕಲನ ಮೇದರಕಲ್ಲು ಮತ್ತು ಇತರ ಪ್ರಬಂದಗಳು ಇವರ ಅತ್ಯುತ್ತಮ ಗ್ರಂಥಗಳಾಗಿವೆ.

# ಅಧ್ಯಾಯ :- ೫ ಸಾಂಸ್ಕೃತಿಕ ಅಧ್ಯಯನ

## ೧ ಶಾಸನಗಳು

ಬೆಳ್ಳೂರಿನಲ್ಲಿ ಸುಮಾರು ೨೪ (೨೪) ಶಾಸನಗಳಿವೆ. ಒಂದೊಂದು ಶಾಸನವೂ ಅತ್ಯಂತ ವಿಶಿಷ್ಟವಾಗಿದ್ದು ಸ್ಥಳೀಯ ಇತಿಹಾಸದ ಮೇಲೆ ಬೆಳಕು ಚಲ್ಲುತ್ತದೆ. ಶಾಸನಗಳು ಗತಕಾಲದ ವೈಭವವನ್ನು ತಿಳಿಸುವ ಕನ್ನಡಿಯಾಗಿವೆ.

ಶಾಸನಗಳಲ್ಲಿ ಮುಖ್ಯವಾಗಿ ಎರಡು ರೀತಿಯ ಶಾಸನಗಳನ್ನು ಕಾಣಬಹುದು. ೧) ಶಿಲಾಶಾಸನ, ೨) ತಾಮ್ರಶಾಸನ. ಕಲ್ಲಿನ ಮೇಲೆ ಕೊರೆದ ಹಳೆಯ ಕಾಲದ ಲೇಖನಕ್ಕೆ ಶಿಲಾಶಾಸನ ಎಂದು ಹೇಳಲಾಗುತ್ತದೆ. ಇಂತಹ ಲೇಖನಗಳನ್ನು ಮುಖ್ಯವಾಗಿ ರಾಜರು, ಶಾಸಕರು, ಮಂಡಲೀಕರು, ಚರ್ಕವರ್ತಿಗಳು ಬರೆಯುತ್ತಿದ್ದರು. ದಪ್ಪನೆಯ ತಾಂಮ್ರದ ತಗಡಿನ ಮೇಲೆ ಲೇಖನಗಳನ್ನು ಕೊರೆಸಿ ಹಲಗೆಯ ಮೇಲೆ ಅಂಟಿಸುತ್ತಿದ್ದರು. ಇಂಥ ತಾಂಮ್ರ ಶಾಸನಗಳನ್ನು ಹೆಚ್ಚಾಗಿ ದೇವಾಲಯದ ಮುಖ್ಯ ದ್ವಾರದ ಮೇಲ್ಭಾಗದಲ್ಲಿ ಕಾಣಿಸುತ್ತವೆ. ಈ ಶಾಸನಗಳು ದಿವ್ಯ ಜ್ಞಾನವನ್ನು ದಯಪಾಲಿಸುವ ಜ್ಞಾನೇಂದ್ರಿಯಗಳಿದಂತೆ. ಇವು ಚರಿತ್ರೆಯನ್ನು ತಿಳಿಸುವುದಲ್ಲದೆ. ಸಮಕಾಲೀನ ಸಾಮಾಜಿಕ ಜೀವನದ ಮೇಲೂ ಬೆಳಕು ಚಲ್ಲುತ್ತದೆ.

ಈ ಶಾಸನಗಳಲ್ಲಿ ಮೊದಲ ಕೆಲವು ಸಾಲುಗಳು ಮಂಗಳೋಕ್ತಿ ಇಂದ ಕೂಡಿರುತ್ತವೆ. ಶುಭಮಸ್ತು, ಸಮಸ್ತುಂ, ಗಳಿರ ಚ್ಚುಂಬಿಚಂದ್ರ ಚಾಮರ ಚಾರವೇ ತ್ರೈಲೋಕ್ಯ ನಗರಾರಂಭ ಮೂಲಸ್ರಂಬಾಯ ಸಂಭುವೇ ಎಂದಿರುತ್ತದೆ.

ಶಾಸನಗಳಲ್ಲಿ ರಾಜರ ಪ್ರಶಂಶೆ, ನಾಡಿನ ಮೆಚ್ಚುಗೆ, ದಾನ ನೀಡಿದ ದಾನ ಪಡೆದವನ ವಿವರಣೆ, ದತ್ತಿಯ ನಿಶ್ಚಿತಕಾಲ, ದತ್ತಿ ನೀಡಿದ ಭೂಮಿಯ ವಿವರ, ಗಡಿರೇಖೆಗಳ ವಿವರ, ದೇವಾಲಯ ಕೆರೆ ಕಟ್ಟೆಗಳನ್ನು ನಿರ್ಮಿಸಿದ ವಿವರಗಳನ್ನು ಕಾಣಬಹುದಾಗಿದೆ. ಕಲೆವು ಶಾಸನಗಳಲ್ಲಿ ಲೇಖನ ಸಿದ್ದಪಡಿಸಿದವನ ಹೆಸರು ಹಾಗೂ ಬರೆದವನ ಹೆಸರೂ ಸಹ ಇರುತ್ತದೆ.

ಈ ಶಾಸನಗಳಲ್ಲಿ ಸ್ಥಳೀಯ ಭಾಷೆಯನ್ನು ಬಳಸಿರುತ್ತಾರೆ. ಕೆಲವು ಪದಗಳ ಕ್ರಮ ಈಗ ಸಾಕಷ್ಟು ಬದಲಾವಣೆ ಹೊಂದಿರುತ್ತದೆ. ಉದಾ:- ಯೀವೂರ ( ಈ ಊರ) ವೋಲೆ (ಓಲೆ)

ಎಂಮ(ಎಮ್ಮ) ಯಿ ಕೆರೆಯ (ಈ ಕೆರೆಯ) ಮರಿಯಾದೆ(ಮರ್ಯಾದೆ) ಯೇರಿಯ(ಏರಿಯ) ಬೊಂದು(ಬಂದು) ಈ ರೀತಿಯ ಅಲ್ಪ ಸ್ವಲ್ಪ ಬದಲಾವಣೆ ಹೊಂದಿರುತ್ತವೆ.

ಇದೇ ರೀತಿಯ ಶಾಸನಗಳು ಬೆಳ್ಳೂರಿನಲ್ಲಿ ಅಧಿಕವಾಗಿವೆ. ಇವು ಇಲ್ಲಿನ ಕೆ ಕಟ್ಟೆಗಳ, ಕೋಟೆ ಕೊತ್ತಲಗಳ, ದೇವಾಲಯಗಳ ದತ್ತಿಗಳ ವಿವರವನ್ನು ಕಾಣಬಹುದಾಗಿದೆ.

ಹೊಯ್ಸಳರ ಸಾಮ್ರಾಜ್ಯ ಬೃಹದಾಕಾರವಾಗಿ ಬೆಳೆದಿತ್ತು. ಅಲ್ಲಿನ ರಾಜ ಮಹಾರಾಜರು ಉತ್ತಮ ಆಡಳಿತವನ್ನು ಕೊಡುವುದರ ಜೊತೆಗೆ ಕೆರೆ ಕಟ್ಟೆಗಳನ್ನು ನಿರ್ಮಿಸುವುದು, ದೇವಾಲಯಗಳನ್ನು ಕಟ್ಟಿಸುವುದು ಅವರ ಮುಖ್ಯ ಉದ್ದೇಶವಾಗಿತ್ತು. ಬೇಲೂರು, ಹಳೇಬೀಡಿನಂತಹ ಜಗತ್ಪ್ರಸಿದ್ಧ ದೇವಾಲಯಗಳೇ ಇದಕ್ಕೆ ಸಾಕ್ಷಿ. ತಮ್ಮ ಆಳ್ವಿಕೆಗೆ ಸೇರಿದ ರಾಜ್ಯವನ್ನು ಪ್ರಾಂತ್ಯಗಳನ್ನಾಗಿ ವಿಭಾಗಮಾಡುತ್ತಿದ್ದರು. ಪ್ರತಿಯೊಂದು ಪ್ರಾಂತ್ಯಕ್ಕೂ ಕೆಲವು ದಂಡನಾಯಕರನ್ನು ನೇಮಿಸಿದ್ದರು.

ಹೊಯ್ಸಳರ ಆಳ್ವಿಕೆಯ ಕಾಲದಲ್ಲಿ ಬೆಳ್ಳೂರಿನಲ್ಲಿ ಮೂರು ದೇವಾಲಯಗಳನ್ನು ನಿರ್ಮಿಸಿರುವುದ ಕಂಡು ಬರುತ್ತದೆ. ಹೊಯ್ಸಳ ದೊರೆ ವಿಷ್ಣುವರ್ಧನನ ಮೊಮ್ಮಗ ವೀರಬಲ್ಲಾಳನು ಲೊಕ್ಕಿಗುಂಡಿ ಎಂಬಲ್ಲಿ ಆಡಳಿತ ನಡೆಸುತ್ತಿದ್ದನು. ಅವನ ದಂಡನಾಯಕ ಮಂಡಲಸ್ವಾಮಿಯು ಗೌರಿಶಂಕರ (ಗೌರವೇಶ್ವರ) ದೇವಾಲಯವನ್ನು ನಿರ್ಮಿಸಿ ೦೭/೦೪/೧೯೯(೦೭/೦೪/೧೧೯೯) ಪೂಜೆಗೆ ಅನುಕೂಲ ಮಾಡಿಕೊಟ್ಟನೆಂದು ತಿಳಿದು ಬರುತ್ತದೆ.

ಬೆಳ್ಳೂರಿನ ವಾಯುವ್ಯದಿಕ್ಕಿಗೆ ಆರಣಿ ಎಂಬ ಗ್ರಾಮವಿದೆ. ಈ ಗ್ರಾಮ ಬೆಳ್ಳೂರಿನ ಅಗ್ರಹಾರಕ್ಕೆ ಸೇರಿತ್ತು. ಮಂಡಲಸ್ವಾಮಿಯು ಅಲ್ಲಿ ಮಂಡಲೇಶ್ವರ ದೇವಾಲಯವನ್ನು ನಿರ್ಮಿಸಿದನು. ಈ ದೇವಾಲಯಕ್ಕೆ ಒಂದು ತೋಪನ್ನು ಬೆಳೆಸಲು ವ್ಯವಸ್ಥೆ ಮಾಡಿದ್ದನು. ಜನ ಇಲ್ಲಿಂದ ಸಂತೆ ಮಾಡಲು ಬೆಳ್ಳುರಿಗೆ ಬರುತ್ತಿದ್ದರು. ಆಗ ಇ.ಸಿ.೮೦(ಇ ಅ ೮೦) ಗೌರವೇಶ್ವರ ದೇವಸ್ಥಾನದ ಬಳಿ ನಿಂತಿರುವ ಕಲ್ಲು ಮಂಡಲ ಸ್ವಾಮಿ ಆರಣಿಯಲ್ಲಿಯೇ ಸಂತೆ ಕಟ್ಟುವಂತೆ ವ್ಯವಸ್ಥೆ ಮಾಡಿಸಿದನು. ಈ ದೇವಾಲಯದ ವ್ಯವಸ್ಥೆಗಾಗಿ ಪೂಜೆ ನೈವೇದ್ಯಗಳ ಖರ್ಚಿಗಾಗಿ ಭೂಮಿಯನ್ನು ದಾನ ಮಾಡಿದ್ದನು. ಈ ಭೂಮಿಯಿಂದ ಬಂದ ವರಮಾನದಿಂದ ಪೂಜೆ ಪುರಸ್ಕಾರಗಳು ನಡೆಯುತ್ತಿದ್ದವು.

ಎರಡನೇ ದೇವಾಲಯ ಮೂಲ ಸಿಂದೇಶ್ವರ ದೇವಾಲಯ ಹೊಯ್ಸಳರ ಮಹಾ ಸಾಮಂತ ಾಚಿದೇವನು ಹೊಯ್ಸಳರ ದೊರೆ ಎರಡನೆಯ ನರಸಿಂಹನ ಆಳ್ವಿಕೆಯ ಕಾಲದಲ್ಲಿದ್ದನೆಂದು ತಿಳಿದು ಬರುತ್ತದೆ. ಕಾಚಿದೇವನಿಗೆ ವೀರ ರಾಜೇಂದ್ರ ಹೋಯ್ಸಳ ಎಂಬ ಬಿರುದು ಇತ್ತೆಂದು ತಿಳಿಯುತ್ತದೆ. ಈತನನ್ನು ಎಡಗೈ ಸೇನಾನಾಯಕ ಎಂದೂ ಸಹ ಕರೆಯುತ್ತಿದ್ದರು. ಇವನು ಸಿಂದೇಶ್ವರ ಲಕ್ಷ್ಮಿನಾರಾಯಣ ಮತ್ತು ಗೋಪಾಲ ದೇವಾಲಯಗಳನ್ನು ನಿರ್ಮಿಸಿ ಕ್ರಿ.ಶ ೧೨೨೩ ೧೨೨೩) ಪೂಜೆಗೆ ಅನುವು ಮಾಡಿದ್ದಾನೆ. ಅವುಗಳ ಪೂಜೆ ಹಾಗೂ ಇತರ ಖರ್ಚಿಗೆ ಜಮೀನನ್ನು ಬಿಟ್ಟಿರುವ ವಿಷಯ ತಿಳಿದು ಬರುತ್ತದೆ.

ಇ.ಸಿ.೮೧(ಇ ಅ ೮೧) ಮೂಲೆ ಸಿಂದೇಶ್ವರ ದೇವಸ್ಥಾನದ ಬಾಗಿಲ ಬಲಕ್ಕೆ ನಿರ್ಮಿಸಿರುವ ಕಲ್ಲು .

ಹೋಯ್ಸಳರ ಕಾಲದಲ್ಲಿ ನಿರ್ಮಿಸಲ್ಪಟ್ಟ ಮೂರನೇ ದೇವಾಲಯವೇ ಆದಿಮಾಧವರಾಯಸ್ವಾಮಿ ದೇವಾಲಯ. ಈ ದೇವಾಲಯವನ್ನು ಕ್ರಿ.ಶ.೧೨೮೮(೧೨೮೮) ರಲ್ಲಿ ನಿರ್ಮಿಸಿದನೆಂದು ತಿಳಿದುಬರುತ್ತದೆ. ಈ ದೇವಾಲಯ ನಿರ್ಮಾತೃ ಮಹಾಪ್ರಧಾನ ಪೆರುಮಾಳದೇವ ದಂಡನಾಯಕ. ಹೊಯ್ಸಳರ ದೊರೆ ಮೂರನೆ ನರಸಿಂಹನಿಂದ ಪಡೆದ ಅಗ್ರಹಾರವಾಗಿದೆ. ಈ ಅಗ್ರಹಾರದ ಮೂಲ ಹೆಸರು ಉದ್ಭವ ನರಸಿಂಹಪುರ. ನಂತರ ಇದನ್ನು ರಜತ ಪುರ ಶ್ವೇತಪುರ ಎಂಬ ಹೆಸರುಗಳಿದ್ದುದು ಈಗಾಗಲೇ ತಿಳಿಸಿರುತ್ತೇವೆ. ನಂತರ ಈ ಊರನ್ನು ಬೆಳ್ಳೂರು ಎಂದು ಕರೆಯಲು ಪ್ರಾರಂಬಿಸಿದರು.

ಈ ಅಗ್ರಹಾರದ ಅಭಿವೃದ್ಧಿಗೆ ವಿಶೇಷವಾದ ಯೋಜನೆಗಳನ್ನು ರೂಪಿಸಿ ಕೊಂಡಿರುವುದು ಕಂಡು ಬರುತ್ತದೆ. ಪೆರುಮಾಳ ದೇವನು ವಿಷ್ಣುದೇವ ಮತ್ತು ಮಾಚವ್ವೆಯ ಮಗನಾಗಿರುತ್ತಾನೆ. ಇವನ ಸಹೋದರಿ ಬಸವಿಯಕ್ಕ, ಸೋದರ ಭಿಮದೇವ ದಂಡನಾಯಕ ಇವರೆಲ್ಲ ತೊರೆನಾಡಿನವರೆಂದು ತಿಳಿದು ಬರುತ್ತದೆ. ಪೆರುಮಾಳದೇವನು ಮಹಾರಾಜನ ಮನೋಮಿತ್ರನೆಂದು ತಿಳಿಸುತ್ತದೆ.

ಪ್ರಸನ್ನ ಮಾಧವ ದೇವಾಲಯವನ್ನು ಕೇಂದ್ರ ಸ್ಥಾನ ಮಾಡಿಕೊಂಡು ಸುಮಾರು ಮೂರರಿಂದ ನಾಲ್ಕು ಕಿ.ಮೀ ಸುತ್ತಳತೆಯಿಂದ ಕೂಡಿದ ಕೋಟೆಯನ್ನು ನಿರ್ಮಿಸಿರುವುದು ತಿಳಿದು ಬರುತ್ತದೆ. ಆದರೆ ಈ ಕೋಟೆಯ ಅವಶೇಷ ಮಾತ್ರ ಉಳಿದಿದೆ. ಕೋಟೆಯ ಬಾಗಿಲಲ್ಲಿ ಒಂದು ಗಣಪತಿ ದೇವಾಲಯವನ್ನು ನಿರ್ಮಿಸಲಾಗಿದೆ. ಈಗಲೂ ಆದೇವಾಲಯವನ್ನು ಕೋಟೆಗಣಪತಿ

ದೇವಾಲಯವೆಂದೇ ಕರೆಯುತ್ತಾರೆ. ಈ ಕೋಟೆಯ ಒಳಗೆ ತಮ್ಮ ವಾಸಸ್ಥಾನ ಮತ್ತು ಆಡಳಿತ ಕಛೇರಿಯನ್ನು ನಿರ್ಮಿಸಿರುವುದು ತಿಳಿದು ಬರುತ್ತದೆ.

ಪೆರುಮಾಳ ದೇವನು ಜನರಿಗೆ ನೀರಾವರಿ ಸೌಲಭ್ಯವನ್ನು ಹೆಚ್ಚಿಸಬೇಕೆಂಬ ದೃಷ್ಟಿಯಿಂದ ಅಲ್ಲಾಳ ಸಮುದ್ರ, ಅವ್ವೆಯ ಕೆರೆ, ಮತ್ತು ತಗಚಿಕೆರೆಗಳನ್ನು ಜೀರ್ಣೋದ್ಧಾರ ಮಾಡಿಸಿರುವುದು ತಿಳಿಯುತ್ತದೆ. ಆದರೆ ಈಗ ಅಲ್ಲಾಳ ಸಮುದ್ರವೇ ದಾಸನ ಕೆರೆ ಎಂದು ಕಂಡು ಬರುತ್ತದೆ. ಈ ಕೆರೆಗಳಿಂದ ಕಾಲುವೆಯನ್ನು ತೋಡಿಸಿದನು. ಈ ಕಾಲುವೆಯ ಕೆಳಗಿನ ಬೆದ್ದ ಭೂಮಿಯನ್ನು ಗದ್ದೆಯನ್ನಾಗಿ ಪರಿವರ್ತಿಸಿದನು. ಹೀಗೆ ಬದಲಾಯಿಸಿದ ಭೂಮಿಯಲ್ಲಿ ಭತ್ತ ಬೆಳೆಯಲು ಅನುವು ಮಾಡಿಕೊಟ್ಟನು. ಆಗ ಉತ್ತಮವಾಗಿ ಮಳೆಯಾಗುತ್ತಿದ್ದರಿಂದ ಕೆರೆಗಳು ವರ್ಷಪೂರ್ತಿ ತುಂಬಿರುತ್ತಿದ್ದವು. ಇದರಿಂದ ಉತ್ತಮ ಬೆಳೆ ಬರುತ್ತಿತ್ತು. ಬೆಳೆಯನ್ನು ಬೆಳೆದ ಮಹಾಜನರೊಂದಿಗೆ ಮಾಡಿಕೊಂಡ ಒಡಂಬಡಿಯಯ ಮೂಲಕ ಅಮ್ರಿತಪಡಿ ಸಂಗ್ರಹಿಸುತ್ತಿದ್ದರು. ಅಂದರೆ ತೆರಿಗೆ ಸಂಗ್ರಹಿಸುತ್ತಿದ್ದರು. ಇದರಿಂದ ಬಂದ ಧನ, ಧಾನ್ಯಗಳನ್ನು ತಿರುನಾರಾಯಣಪುರ (ಮೇಲುಕೋಟೆ), ತೊಂಡನೂರು, ನಾಗಮಂಗಲ, ದಡಗ ಮೊದಲಾದ ಹದಿನೆಂಟು ನಾಡುಗಳ ಶ್ರೀ ವೈಷ್ಣವರ ಮುಂದೆ ಆದ ಒಪ್ಪಂದದಂತೆ ಖರ್ಚು ಮಾಡುತ್ತಿದ್ದರು. ಒಂದು ವರ್ಷಕ್ಕೆ ನಿಬಂಧದಂತೆ ಖಂಡುಗಕ್ಕೆ ನಾಲ್ಕು ಹಣದಂತೆ ಕೊಡುವುದಲ್ಲದೆ ಅಧಿಕಾರಿಗಳು ಮತ್ತು ಗೌಡುಗಳಿಗೂ ಕೊಡಬೇಕಾದ ನಗದನ್ನು ತಿಳಿಸಿದ್ದರು. ಇದಲ್ಲದೆ ಊರೊತ್ತು ನೋರೊತ್ತು ಮತ್ತು ಸಂಜೆ ಮಠದ ಬಾಬತ್ತುಗಳಿಗೆ ಮಹಾಜನಗಳೇ ವೆಚ್ಚ ಮಾಡಬೇಕೆಂದು ಸೂಚಿಸಿದ್ದರು.

ಅಲ್ಲಾಳ ಸಮುದ್ರದ ಕೆರೆಯನ್ನು ಜೀರ್ಣೋದ್ಧಾರ ಮಾಡಿಸಿದಾಗ ಶ್ರೀರಂಗಪುರದ ಬೆದ್ದಲು ಭೂಮಿ ಮುಳುಗಡೆಯಾಯಿತು. ಇದಕ್ಕೆ ಭೂಮಿ ಕಳೆದು ಕೊಂಡವರಿಗೆ ಕೆರೆಯ ಕೆಳಭಾಗದಲ್ಲಿ ಹನ್ನೆರಡು ಸಲಗೆ ಭೂಮಿಯನ್ನು ಪಡೆದು ಕೊಂಡರು. ಆ ಗದ್ದೆಗಳಿಂದ ಬಂದ ಆದಾಯದ ಹನ್ನೆರಡು ಗದ್ಯಾಣಗಳನ್ನು ವರ್ಷಂಪ್ರತಿ ಬೆಳ್ಳೂರು ಮಹಾ ಜನಕ್ಕೆ ಕೊಡಲು ಒಪ್ಪಿದರು. ಇದಕ್ಕೆ ಸಾಕ್ಷಿಗಳಾಗಿ ದಡಗ, ಆರಣಿ, ಚಾಕೇನಹಳ್ಳಿ ಊರುಗಳ ಸಮ್ಮುಖದಲ್ಲಿ ತೀರ್ಮಾನವಾಗಿದೆ.

ಅಗ್ರಹಾರವಾಗಿದ್ದ ಬೆಳ್ಳೂರಿಗೆ ಸೇರಿದಂತೆ ಬೆಟಗಟದಕೋಟೆ, ಬಿಲ್ಲಬಿಳಗುಂದ (ಬಿಳಗುಂದ), ತಿಪ್ಪೂರು(ಯಡಿಯೂರಿನಿಂದ ಕುಣಿಗಲ್ ಮಾರ್ಗದಲ್ಲಿ ಬರುತ್ತದೆ) ಪ್ರಮುಖ ಗ್ರಾಮಗಳಾಗಿದ್ದವು. ಈ ಗ್ರಾಮಗಳಿಗೆ ಸೇರಿದಂತೆ ಕೆಲವು ಊರುಗಳನ್ನು ದತ್ತಿ ಪಡೆದಿರುತ್ತಾರೆ.

ಗಮ್ಮನಹಳ್ಳಿ, ಹರದಗೌಡನಹಳ್ಳಿ, ಬೇಗೂರು, ಕೂತನಹಳ್ಳಿ, ರಾಗಿಯಹಳ್ಳಿ, ಕಾಚನಹಳ್ಳಿ, ರಿಯ ಬೇಡರಹಳ್ಳಿ, ಚಿಕ್ಕ ಬೇಡರಹಳ್ಳಿ, ಹಂಚಿಯಹಳ್ಳಿ, ಗರುಡನಹಳ್ಳಿ, ಹಟ್ಟಣ, ಬೀಚನಹಳ್ಳಿ, ಮಿರುವನಹಳ್ಳಿ, ಕಾಳೆರಾಮನಹಳ್ಳಿ, ಸೆಟ್ಟಿಯಹಳ್ಳಿ ಮುಂತಾದ ಊರುಗಳಿಂದ ಬರುತ್ತಿದ್ದ ಆಧಾಯದಿಂದ ಇಲ್ಲಿನ ದೇವಾಲಯಗಳನ್ನು ನಿರ್ವಹಿಸುತ್ತಿದ್ದರು.

ಅಗ್ರಹಾರವಾದ ಬೆಳ್ಳೂರು ಹಾಗೂ ಇದಕ್ಕೆ ಸೇರಿದ ಗ್ರಾಮಗಳನ್ನು ನೋಡಿಕೊಳ್ಳಲು ೬(೯೬) ಮಹಾಜನಗಳಿದ್ದರು. ಈ ಮಹಾಜನಗಳಿಗೆ ಕೆಲವು ಊರುಗಳನ್ನು ದತ್ತು ಕೊಡಲಾಗಿತ್ತು. ಅವರಿಗೆ ಸೇರಿದ ಊರುಗಳನ್ನು ನಿರ್ವಹಣೆ ಮಾಡುವುದು ಅವರವರ ಕರ್ಯವ್ಯವಾಗಿತ್ತು. ಪ್ರತಿ ಊರುಗಳ ನಿರ್ವಹಣೆ ಮಾಡಿಕೊಂಡು ಹೆಚ್ಚಾದ ಅಮ್ರಿತ ಪಡಯನ್ನು ಪ್ರಸನ್ನಮಾದವದೇವರು ಶ್ರೀ ರಾಮಕೃಷ್ಣದೇವರು ಶ್ರೀ ವರದ ಅಲ್ಲಾಳನಾಥದೇವರ ನಿರ್ವಹಣೆಗೆ ಕೊಡುತ್ತಿದ್ದರು.

ಪೆರುಮಾಳದೇವಣ್ಣಾಯಕನು ದೇವಾಲಯದಲ್ಲಿ ಪಂಚಿಕೇಶ್ವರ ಮೂರ್ತಿಯನ್ನು ಪ್ರತಿಸ್ಥಾಪಿಸಿದ್ದಾನೆ. ಇದಕ್ಕಾಗಿ ಇಂದ್ರಪರ್ವ ಮತ್ತು ಆರಣ ಪೂಜೆಗಳಿಗಾಗಿ ದತ್ತಿ ನೀಡಿದ್ದಾನೆ. [ ಇಂದ್ರ ಪೂಜೆ ಪ್ರಾಚೀನಕಾಲದಲ್ಲಿ ಇಂದ್ರನ ಗೌರವಾರ್ಥ ಅರಸರಿಂದಲೇ ನಡೆಯುತ್ತಿದ್ದ ಹಬ್ಬ. ಆರಣ ಪೂಜೆ ಎಂದರೆ ಜೈನಕಲ್ಪ ಅಥವಾ ಸ್ವರ್ಗಕ್ಕೆ ಆರಣ ಎಂಬ ಹೆಸರಿದೆ. ಆದರೆ ಇಲ್ಲಿ ಈ ಪದ ಶೈವದೇವಾಲಯಕ್ಕೆ ಸಂಬಂಧಿಸಿದಂತೆ ಪ್ರಯೋಗವಾಗಿದೆ. ಆದರೆ ಇದರ ಖಚಿತವಾದ ಅರ್ಥ ತಿಳಿದು ಬಂದಿಲ್ಲ]

ಉದ್ಭವನರಸಿಂಹಪುರವಾದ ಬೆಳ್ಳೂರಿನ ಪ್ರಸನ್ನ ಮಾಧವ, ರಾಕಮರಷ್ಣ ಮತ್ತು ವರದ ಅಲ್ಲಾಳನಾಥ ದೇವಾಲಯಗಳ ಅಧಿಕಾರಿಯಾದ ಪೆರುಮಾಳ ದಂಡನಾಯಕನು ಪೂಜೆ ಪುರಸ್ಕಾರಗಳಿಗಾಗಿ ಮೂರು ಹಳ್ಳಿಗಳನ್ನು ಅರಸನಿಂದ ತಾಂಮ್ರ ಶಾಸನದ ಮೂಲಕ ದತ್ತಿ ಪಡೆದನು. ದೇವಾಲಯದ ಒಡೆತನವನ್ನು ಈತನಿಗೆ ವಹಿಸಲಾಗಿತ್ತು. ನಂತರ ಈತನೇ ಆ ದತ್ತಿಯನ್ನು ೯೬ ಮಹಾಜನರಿಗೆ ಹಂಚಲು ಅವರು ಆ ಹಳ್ಳಿಗಳ ಉತ್ಪನ್ನವನ್ನು ೭ ವರತ್ತಿಗಳನ್ನಾಗಿ ವಿಭಾಗಿಸಿ ಒಂದು ಭಾಗವನ್ನು ಪೆರುಮಾಳ ದೇವನಿಗೆ ಉಡುಗೊರೆಯಾಗಿ ನೀಡಲಾಗಿದೆ. ಆ ಮೂರು ಹಳ್ಳಿಗಳು ಕೊಡಬೇಕಾಗಿದ್ದ ಸುಂಕಗಳನ್ನು ಮಾನ್ಯ ಮಾಡಲಾಗಿತ್ತು. ಅವುಗಳಲ್ಲಿ ಆನೆಯ ಸೇಸೆ, ಕುದುರಡಯ ಸೇಸೆ, ಕಟಕ ಸೇಸೆ ಮತ್ತು ದಂಡಿನ ಭಾಗ್ಯತೆ ಮುಂತಾದ ತೆರಿಗೆಗಳಿಂದ ಈ ಮೂರು ಹಳ್ಳಿಗಳಿಗೆ ವಿನಾಯ್ತಿಯಿತ್ತು. ಆದರೆ ಆ ಹಳ್ಳಿಗಳು ಯಾವುವೆಂದು ತಿಳಿದು ಬಂದಿಲ್ಲ.

ಮಹಾದಂಡನಾಯಕ ಎಂದರೆ ಸೈನ್ಯದ ಮುಖ್ಯಸ್ಥ ದಂಡನಾಯಕ ಎಂದು ಒಂದು ಭಾಗದ ಸೈನ್ಯದ ಮುಖ್ಯಸ್ಥ ಎಂದರ್ಥ. ಆದರಿಂದ ಪೆರುಮಾಳ ದಂಡನಾಯಕ ಎಂದು ಕರೆಯುತ್ತಾರೆ. ಇವನ ಬಳಿ ನಾಲ್ಕು ರೀತಿಯ ಸೇನೆಗಳಿದ್ದು ಅವುಗಳನ್ನು ಸಜ್ಜುಗೊಳಿಸಿ ಯುದ್ದದ ಸಮಯದಲ್ಲಿ ಅರಸನ ನೆರವಿಗೆ ಕಳುಹಿಸುತ್ತಿದ್ದರೆಂದು ತಿಳಿದುಬರುತ್ತದೆ. ದಂಡಿನ ಭಾಗ್ಯತೆ ಎಂದರೆ ಸಂಚರಿಸುತ್ತಿರುವ ಸೈನ್ಯಬಲ ಒಂದು ಕಡೆ ನಿಂತಾಗ ಅದರ ಊಟೋಪಚಾರಗಳ ವೆಚ್ಚಕ್ಕಾಗಿ ಪ್ರಜೆಗಳಿಂದ ಕರ ವಸೂಲಿ ಮಾಡಲಾಗುತ್ತಿತ್ತು.

ಬೇಲೂರಿನ ದೇವಾಲಯದಲ್ಲಿ ಐಂದ್ರ ಪರ್ವ ಮತ್ತು ಆರಣ ಪೂಜೆಗಳನ್ನು ನಡೆಸಲು ಭೂಮಿಯನ್ನು ೧೨ ಒಕ್ಕಲುಗಳಿಗೆ ನೀಡಲಾಗಿತ್ತು. ಮೂರು ವರ್ಷಗಳ ವರೆಗೆ ಗುತ್ತಿಗೆ ನೀಡಿ ನವೀಕರ ಮಾಡುತ್ತಿದ್ದರು. ೧೨೫೧ ರಿಂದ ೧೨೮೪ ರ ವರೆಗೆ ಈ ಭೂಮಿಯನ್ನು ಎಲ್ಲಾ ಸುಂಕಗಳಿಂದ ಮಾನ್ಯ ಮಾಡಲಾಗಿತ್ತು. ವರ್ಷಂಪ್ರತಿ ೩೭ ಗದ್ಯಾಣ ಮತ್ತು ೨ ಪಲ್ಲ ಉತ್ಪನ್ನವನ್ನು ಕೊಡಬೇಕಾಗಿತ್ತು. ೧೨೮೭ ರಲ್ಲಿ ೫೪ ಗದ್ಯಾಣಗಳಿಗೆ ಏರಿಸಲಾಯಿತು. ಇದರಿಂದ ಬಂದ ಹಣವನ್ನು ದೇವಾಲಯದಲ್ಲಿ ನಡೆಸುವ ಹಬ್ಬಗಳಿಗೆ ವಿನಿಯೋಗಿಸಲಾಗುತ್ತಿತ್ತು. ಅಲ್ಲದೆ ಒಕ್ಕಲುಗಳಿಗೆ ೧೨ ಮನೆಗಳನ್ನು ಕಟ್ಟಿಸಕೊಡಲಾಗಿತ್ತು.

ಪೆರುಮಾಳ ದಂಡನಾಯಕನು ತನ್ನ ಮನೆಯಲ್ಲಿ ನಡೆಸುತ್ತಿದ್ದ ಛತ್ರದಲ್ಲಿ ೧೨ ಜನ ನಿತ್ಯ ಪ್ರವಾಸಿ ಬ್ರಾಹ್ಮಣರು, ಊರಿನ ಮಾಸವೆಗ್ಗಡೆ, ಛತ್ರವನ್ನು ನೆಡೆಸುವಾತ, ಬಾಣಸಿಗ ಮತ್ತು ಪರಿಚಾರಕ ಹೀಗೆ ೧೬ ಜನರ ಊಟಕ್ಕೆ ವ್ಯವಸ್ಥೆ ಮಾಡಿದ್ದನೆಂದು ತಿಳಿದು ಬರುತ್ತದೆ.

ಉಳಿದ ತೆರಿಗೆ ಹಣವನ್ನು ಒಂದು ವರ್ಷಕ್ಕೆ ಈ ರೀತಿ ಖರ್ಚು ಮಾಡಬೇಕೆಂದು ತಿಳಿಸಿರುತ್ತಾರೆ. ತುಪ್ಪಕ್ಕೆ ೧೦ ಗದ್ಯಾಣ, ಎಳ್ಳೆಣ್ಣೆಗೆ ೩೬ ಗದ್ಯಾಣ, ಹೆಸರು ಹಾಗೂ ತೊಗರಿಗೆ ಎರಡು ಗದ್ಯಾಣ, ಶ್ರೀಗಂದಕ್ಕೆ ಒಂದು ಗದ್ಯಾಣ, ಧೂಪಕ್ಕೆ ಐದುಹಣ, ಉಪ್ಪು, ಮೆಣಸು, ಸೀಗೆಕಾಯಿ, ಏಲಕ್ಕಿ, ಲವಂಗ, ಎಲೆ ಅಡಿಕೆ ಕೊಳ್ಳಲೂ ಸಹ ಹಣವನ್ನು ನಿಗದಿ ಮಾಡಲಾಗಿದೆ. ಈ ಕಾರ್ಯವೂ ಸೂರ್ಯ ಚಂದ್ರರಿರುವವರೆಗೂ. ನಡೆಸಿಕೊಂಡು ಹೋಗಬೇಕೆಂದು ತಿಳಿಸಲಾಗಿದೆ. ಆದರೆ ಈ ಶಾಸನ ಬರೆಸಿದ ಇಪ್ಪತ್ತೈದು ವರ್ಷಗಳಲ್ಲೆ ಪೆರುಮಾಳ ದಂಡನಾಯಕನ ಮಗ ಈ ಕೊಡಗಿ ಗ್ರಾಮಗಳನ್ನು ಮಾರಾಟ ಮಾಡಿರುವುದು ವಿಪರ್ಯಾಸವಾಗಿದೆ.

ಬೆಳ್ಳೂರು ವೆಂಕಟೇಶ್ವರ ದೇವಾಲಯದ ಗರುಡಗಂಬದ ಮೇಲೆ ಇರುವ ಶಾಸನ ಪ್ರಕಾರ ಳ್ಳುರಿನ ಶ್ರೀ ಪ್ರಸನ್ನ ಮಾಧವ ದೇವಾಲಯದ ಮುಂದಿರುವ ಉತ್ಸವ ಮಂಟಪ ೀಪಮಾಲಿಕೆಯ ಕಂಬ ಹಾಗೂ ಬಲಿ ಪೀಠವನ್ನು ತೋರಗಲೆಯ ದುಗಾಹಧಿಪತಿ ಾಮಪ್ಪರಾವುತರ ಮಗ ಹರುದಾಸರಾವುತ ಿಂಬುವರು ಕ್ರಿ.ಶ. ೧೫೧೮ ರಲ್ಲಿ ನಿರ್ಮಿಸಿದರೆಂದು ತಿಳಿದು ಬರುತ್ತದೆ.

ನವರಂಗದ ಮುಂಭಾಗದ ಮುಖ ಮಂಟಪದಲ್ಲಿ ಹೊಯ್ಸಳರ ಕಾಲದ ಘಂಟಾಕೃತಿಯ ಂಟು ಕಂಬಗಳಿವೆ. ಇಡೀ ದೇವಾಲಯವನ್ನು ಐದು ಪಟ್ಟಿಕೆಗಳುಳ್ಳ ನಕ್ಷತ್ರಾಕಾರದ ವೇದಿಕೆಯ ಮೇಲೆ ನಿರ್ಮಿಸಿದ್ದು ಹೊರ ಪ್ರದಕ್ಷಿಣೆಗೆ ಅವಕಾಶ ಕಲ್ಪಿಸಲಾಗಿದೆ. ದೇವಾಲಯದ ಹೊರ ೋಡೆಯ ಮೇಲೆ ಶಿಖಕೃತಿಯ ಕೆತ್ತನೆಗಳನ್ನೂ ಪಟ್ಟಿಗೆ ಹಾಗೂ ಸ್ಥಂಬಿಕೆಗಳನ್ನು ಕೆತ್ತಲಾಗಿದೆ. ತ್ರಿಕೋಟಚಲವಾದರೂ ಮಧ್ಯದ ಕೂಟ ಮಾತ್ರ ಶಿಖರವನ್ನು ಹೊಂದಿದೆ. ಈ ಶೀಖರವು ನಾಲ್ಕು ಅಂತಸ್ತುಗಳನ್ನು ಹೊಂದಿದ್ದು ಮೇಲ್ಭಾಗ ಪದ್ಮದ ದಳಗಳ ರೂಪದಲ್ಲಿದೆ. ಪ್ರತಿ ಅಂತಸ್ತಿನಲ್ಲಿಯೂಶಂಖಗಳನ್ನು ಕೆತ್ತಲಾಗಿದೆ. ಶಿಖರವು ಯಾವುದೇ ಕಳಸವನ್ನು ಹೊಂದಿಲ್ಲ. ಇವಿಷ್ಟು ಹೊಯ್ಸಳರ ಕಾಲದ ರಚನೆಯಾಗಿದೆ. ಈ ದೇವಾಲಯದ ಮುಂಭಾಗ ಪಟಲಾಂಕಣ ಹಾಗೂ ಪ್ರವೇಶದ್ವಾರವು ವಿಜಯನಗರದ ಕಾಲದ ರಚನೆಯಂತೆ ತೋರುತ್ತದೆ. ಪಟಲಾಂಕಣವು ವಿಶಾಲವಾಗಿದ್ದು ನಲವತ್ತೈದು ಕಂಬಗಳನ್ನು ಹೊಂದಿದೆ. ಈ ದೇವಾಲಯ ಬೆಳ್ಳೂರಿನ ಇತಿಹಾಸಕ್ಕೆ ಮೆರುಗನ್ನು ನೀಡುತ್ತದೆ.

ಶ್ರೀ ಆದಿಮಾಧವರಾಯ ದೇವಾಲಯವು ತ್ರಿಕೂಟಾಚಲವಾಗಿದ್ದು ಮುಖ್ಯ ಗುಡಿಯಲ್ಲಿ ಐದು ಅಡಿ ಎತ್ತರದ ಸುಂದರವಾದ ಮೂರ್ತಿ ಇದೆ. ಮೂರ್ತಿಯು ಗದೆ, ಚಕ್ರ, ಶಂಖ ಮತ್ತು ಪದ್ಮವನ್ನು ಹೊಂದಿದೆ. ಪ್ರಭಾವಳಿಯಲ್ಲಿ ದಶಾವಾತಾರವನ್ನು ಕೆತ್ತಲಾಗಿದೆ. ಇದರ ಮುಂಭಾಗಿಲ ಬಲದಲ್ಲಿ ಸುಮಾರು ಐದು ಅಡಿ ಎತ್ತರದ ವೇಣುಗೋಪಾಲ ವಿಗ್ರಹವಿದೆ. ಪ್ರಭಾವಳಿಯಲ್ಲಿ ಸುಂದರವಾದ ನಾಗರಹೆಡೆಯನ್ನು ಕೆತ್ತಲಾಗಿದೆ. ಈ ವಿಗ್ರಹದ ವಿಶೇಷವೆಂದರೆ ಗೋಪಾಲನ ವಿಗ್ರಹಕ್ಕೆ ಯಾವುದೇ ಕಿರೀಟವಿಲ್ಲದೆ ಶಿರಪಟ್ಟಿ ಹೊಂದಿದ್ದು ವಿಗ್ರಹ ನೈಜವಾಗಿ ಬಿಂಬಿತವಾಗಿದೆ. ಮಾದವರಾಯಸ್ವಾಮಿ ದೇವಾಲಯದ ಮುಂಬಾಗಿಲ ಎಡಭಾಗದಲ್ಲಿ ಲಕ್ಷ್ಮಿನಾರಾಯನ ಸ್ವಾಮಿ ವಿಗ್ರಹವಿದೆ. ನಯನ ಮನೋಹರವಾದ ಈ ಮೂರು ವಿಗ್ರಹಗಳು ದೇವಾಲಯದ ಸೌಂದರ್ಯವನ್ನು ಹೆಚ್ಚಿಸಿ ಜನರಲ್ಲಿ ಭಕ್ತಿ ಭಾವವನ್ನು ಮೂಡಿಸುವಂತಿವೆ.

ದೇವಾಲಯದ ನವರಂಗದಲ್ಲಿ ಘಂಟಾಕೃತಿಯ ನಾಲ್ಕು ಕಂಬಗಳಿವೆ. ಭುವನೇಶ್ವರಿಯಲ್ಲಿ ಕಮಲವನ್ನು ಕೆತ್ತಲಾಗಿದೆ. ನವರಂಗದ ಬಲಭಾಗದಲ್ಲಿ ಸುಂದರವಾದ ಗಣಪತಿ ವಿಗ್ರಹವಿದೆ. ಇದಕ್ಕೆ ವೈಷ್ಣವ ಸಂಪ್ರದಾಯದ ತಿಲಕ ಹಾಗೂ ಭೂಜಕೀರ್ತಿಯನ್ನು ಕೊರೆಯಲಾಗಿದೆ. ಉತ್ತರದಲ್ಲಿ ಶ್ರೀ ರಾಮಾನುಜರ ಹಾಗೂ ನಾಮಳ್ವರರ ವಿಗ್ರಹಗಳಿವೆ.

ಅಡಿ ಟಿಪ್ಪಣಿ:-

- ೨೩ (IV ನಾಮಂ೩೮) ಮಾಧವ ದೇವಸ್ಥಾನದ ಚಂದ್ರಶಾಲೆಯ ಒಂದನೆಯ ಕಲ್ಲು
- ೨೪ (IV ನಾಮಂ೩೯) ಚಂದ್ರ ಶಾಲೆಯಲ್ಲಿರುವ ಎರಡನೇ ಕಲ್ಲು
- ೨೫ (IV ನಾಮಂ೪೦) ಚಂದ್ರ ಶಾಲೆಯಲ್ಲಿನ ಕೆಳಭಾಗ
- ೨೬ (IV ನಾಮಂ೪೧) ಚಂದ್ರ ಶಾಲೆಯಲ್ಲಿರುವ ಮೂರನೇ ಶಾಸನ
- ೯೧ (IV ನಾಮಂ೪೨) ವೆಂಕಟೇಶ್ವರ ದೇವಸ್ಥಾನದ ಮುಂದೆ ಗರುಡಗಂಬದ ಮೇಲೆ

ಪೆರುಮಾಳ ದಂಡನಾಯಕ ಕಾಲದಿಂದಲೂ ಬೆಳ್ಳೂರು ಒಂದು ವ್ಯಾಪಾರ ಕೇಂದ್ರವಾಗಿ ಮಾರ್ಪಟ್ಟಿತಿ. ವ್ಯಾಪಾರ ದಾರರು ಶ್ರವಣಬೆಳಗೊಳ, ಹಾಸನ, ಮಂಗಳೂರು ಸಮುದ್ರ ತೀರ ಪ್ರದೇಶಗಳಿಗೆ ಹೋಗಿ ಬರುತ್ತಿದ್ದರು. ಹೀಗೆ ಬರುತ್ತಿದ್ದ ಸಂದರ್ಭದಲ್ಲಿ ಕೆಲವು ಜನ ಬೆಳ್ಳೂರಿನಲ್ಲಿಯೇ ಉಳಿದರು ಇವರ ಮೂಲ ಸ್ಥಳ ಮಾಗಡಿ ತಾಲ್ಲೂಕು ಶಂಕಿಘಟ್ಟದವರೆಂದು ತಿಳಿದು ಬರುತ್ತದೆ. ಇವರೆಲ್ಲ ಜೈನಧರ್ಮದ ದಿಗಂಬರ ಪಂಗಡಕ್ಕೆ ಸೇರಿದವರಾಗಿರುತ್ತಾರೆ. ಅವರು ಬೆಳ್ಳೂರು ಮಾತ್ರವಲ್ಲದೆ. ದಡಗ, ಮಾಯಸಂದ್ರ, ತಂಡಗ, ಹುಲಿಕಲ್ಲು ಗಳಲ್ಲಿ ನೆಲೆಸಿದರು.

ಹದಿನಾರು ಹದಿನೇಳನೇ ಕಾಲದಲ್ಲಿ ಗಂಗರಾಜರ ಆಡಳಿತ ಅಲ್ಪ ಪ್ರಮಾಣದಲ್ಲಿತ್ತು. ಡಿಳ್ಳಿ, ಕೊಲ್ಲಾಪುರ, ಜಿನಕಂಜಿ, ಪೆನಗುಂಡದ ಸಿಂಹಾಸನಾಧೀಶರಾದ ಲಕ್ಷ್ಮಿಸೇನ ಭಟ್ಟಾರಕರ ಆದೇಶದಂತೆ ಮೈಸೂರು ದೇವರಾಜ ಒಡೆಯರು ನೀಡಿದ ನಿವೇಶನದಲ್ಲಿ ಬಸದಿ ನಿರ್ಮಿಸಲು ತೀರ್ಮಾನ ಕೈಗೊಂಡರು. ಆಗ ಹುಲಿಕಲ್ಲು ಪದುಮಣಸೆಟ್ಟರ ಮಗನಾದ ದೊಡ್ಡಾದಂಣಸೆಟ್ಟರ ಪುತ್ರ ಸಕ್ಕರೆಸೆಟ್ಟರು ಕ್ರಿ.ಶ.೧೭ ನೇ ಶತಮಾನದಲ್ಲಿ ವಿಮಲನಾಥ ಬಸದಿ ನಿರ್ಮಿಸಿ ವಿಮಲನಾಥ ವಿಗ್ರಹ ಪ್ರತಿಷ್ಠಾಪಿಸಿದರೆಂದು ತಿಳಿದು ಬರುತ್ತದೆ.

೯೪ (IV ನಾಮಂ೪೩) ವಿಮಲ ತೀರ್ಥಂಕರ ಬಸದಿಯ ಪಡಸಾಲೆಯ ಗೋಡೆಯ ಮೇಲೆ

೯೬ (O ೧೯೩೯ - ೬೨) ಬ್ರಹ್ಮಸೂರಪ್ಪನವರಲ್ಲಿದ್ದ ತಾಂಮ್ರ ಶಾಸನ.

ಮಸೀದಿಯ ಒಳಬಾಗಿಲ ಮೇಲುಗಡೆ ಇರುವ ಪರ್ಷಿಯನ್ ಶಾಸನದ ಪ್ರಕಾರ ಇಬ್ರಾಹಿ ಎಂಬುವನು ಸದರಿ ಮಸೀದಿಯನ್ನು ಹಿಜರಿಶಕೆ ೧೨೦೧ ಅಂದರೆ ೧೭೮೬ (೧೭೮೬) ರಲ್ಲಿ ನಿರ್ಮಿಸಿದ ವಿಷಯ ತಿಳಿದು ಬರುತ್ತದೆ. ಆ ಶಾಸನ ಈ ರೀತಿ ತಿಳಿಸುತ್ತದೆ.

೧. ಕಸ್ಬ್ ರಾಹೀಂ ಹಸ್ಬತುಲ್ಲಾ (ಅಂದರೆ ಅಲ್ಲಾನಿಗೆ ೧೦೧ ಹೆಸರುಗಳಿವೆ ಅದರಲ್ಲಿ ಇದು ಒಂದಿರಬೇಕು)

೨. ಮಸ್ಜೀದ್ ಶುದ್ ಪಾನ್ – ಏ – ಬೂತುಲ್ಲಾ ( ಅಂದರೆ ಅಲ್ಲಾ ಕಾಣಿಸುವುದಿಲ್ಲಾ ಅಗೋಚರ ಶಕ್ತಿಯಾಗಿದೆ ಎಂಬ ನಂಬಿ ಇರಬೇಕು)

೩. ೧೨೦೧ ಹಿಜರಿಶಕೆ (ಅಂದರೆ 1786 (೧೭೮೬) ರಲ್ಲಿ ನಿರ್ಮಿಸಿರ ಬಹುದೆಂದು ನಂಬಿಕೆ ಇದೆ)

❖ ೯೫(ಫಿಖಗಿ ನಾಮಂ ೧೪೬) ಮಸೀದಿ ಒಳಬಾಗಿಲ ಗೋಡೆಯ ಮೇಲೆ

## ಬೆಳ್ಳೂರು ಸಹೋದರಿಯರು

ಸಂಗೀತ:-

ಬೆಳ್ಳೂರು ಸಾಂಸ್ಕೃತಿಕವಾಗಿ, ಶೈಕ್ಷಣಿಕವಾಗಿ ಅಭಿವೃದ್ಧಿ ಹೊಂದುತ್ತಿರುವ ಊರಾಗಿದೆ. ಇತ್ತೀಚೆಗೆ ಅಕ್ಷರಸ್ಥರ ಸಂಖ್ಯೆ ಹೆಚ್ಚಾದಂತೆ ವಿವದ ಇಲಾಖೆಗಳಲ್ಲಿ ಸೇವೆ ಸಲ್ಲಿಸುತ್ತಿರುವವರ ಸಂಖ್ಯೆ ಹೆಚ್ಚಾಗುತ್ತಿದೆ. ಇಂಥ ಊರು ಇಂದು ಕರ್ನಾಟಕದಲ್ಲಿ ಹೆಸರುಗಳಿಸಿದ ಬೆಳ್ಳೂರು ಸಹೋದರಿಯರನ್ನು ಕೊಡುಗೆಯಾಗಿ ನೀಡಿದೆ. ಬೆಳ್ಳೂರಿನಲ್ಲಿಯೇ ವಿದ್ಯಾಭ್ಯಾಸ ಮಾಡಿ ರೈಲ್ವೆ ಇಲಾಖೆಯಲ್ಲಿ ಕೆಲಸದಲ್ಲಿದ್ದ ಬಿ.ಎಸ್. ಶಂಕರನಾರಯಣರಾವ್ ರವರ ತಂದೆ. ತಮ್ಮಣ್ಣನವರು ತಮ್ಮ ಎಂಬ ಅನ್ವರ್ಥನಾಮದಿಮದ ಪ್ರಖ್ಯಾತರಾಗಿದ್ದವರು. ಸಮಾಜ ಸೇವೆಯಲ್ಲಿ ಮುಂದಾಗಿದ್ದರು. ಇವರ ಪ್ರೋತ್ಸಾಹದಿಮದ ಮಗ ವಿದ್ಯಾಭ್ಯಾಸ ಪಡೆದು ರೈಲ್ವೆ ಇಲಾಖೆಯಲ್ಲಿ ಕೆಲಸ ಪಡೆದರು. ತಮ್ಮಣ್ಣನವರು ಮಗನಿಗೆ ಮದುವೆ ಮಾಡಲು ತೀರ್ಮಾನಿಸಿ ವಧು ಅನ್ವೇಷಣೆ ನಡೆಸಿದರು. ಅಂಗೈಯಲ್ಲಿ ಬೆಣ್ಣೆ ಇಟ್ಟು ಕೊಂಡು ಊರೆಲ್ಲ ಸುತ್ತಿದ್ದರು ಎಂಬ ನಾಣ್ನುಡಿಯಂತೆ ವಧು ಬೆಳ್ಳೂರಿನಲ್ಲಿಯೇ ಇತ್ತು. ಅದೇ ಸೀತಾಲಕ್ಷ್ಮಮ್ಮ. ಇವರು ಉಪಾಧ್ಯಾಯರಾಗಿದ್ದ ಎನ್ ನರಸಿಂಹಯ್ಯ (ಅಯ್ಯಮೇಷ್ಟ್ರು) ನವರ ಮಗಳು.

ಶಂಕರನಾರಾಯಣರಾವ್ ಮತ್ತು ಸೀತಾಲಕ್ಷ್ಮಮ್ಮನಿಗೆ ರಾಧ, ರಮಾ, ಉಮಾ, ಗಾಯತ್ರಿ, ವರಲಕ್ಷ್ಮಿ ಎಂಬ ಹೆಣ್ಣುಮಕ್ಕಳು, ರಾಮ್ ಪ್ರಸಾದ್ ಎಂಬ ಒಂದು ಗಂಡು ಮಗ ಇದ್ದರು. ರಾಮ್ ಪ್ರಸಾದ್ ಈಗ ಚನ್ನೈನಲ್ಲಿ ಉನ್ನತ ಹುದ್ದೆಯಲ್ಲಿದ್ದರು. ಹೆನ್ಣು ತಂದೆ ತಾಯಿಗಳಿಗೆ ಭಾರ ಎನ್ನುತ್ತಿದ್ದ ಕಾಲ ದೂರವಾಗಿ ಜವಾಬ್ದಾರಿಯುತ ಕೆಲಸದಲ್ಲಿ ತೊಡಗಿದ್ದಾರೆ.

ರಾಧಾ, ರಮಾ ಎಂಬುವರು ಕರ್ನಾಟಕ ಶಾಸ್ತ್ರೀಯ ಸಂಗೀತದಲ್ಲಿ ಪ್ರಸಿದ್ಧರು. ಇವರು ಮೈಸೂರಿನ್ನಲಿ ವಿದ್ಯಾಭ್ಯಾಸ ಮಾಡಿ ಇಂದು ಬೆಂಗಳೂರಿನಲ್ಲಿ ನೆಲಸಿದ್ದಾರೆ. ಬೆಳ್ಳೂರು ಸಹೋದರಿಯರು ಎಂಬ ಹೆಸರಿಟಗಟುಕೊಂಡು ರಾಜ್ಯ ಹಾಗೂ ದೇಶದ ನಾನಾ ಭಾಗಗಳಲ್ಲಿ ಹಾಡುಗಾರಿಕೆಯಲ್ಲಿ ಪ್ರಸಿದ್ಧರಾಗಿದ್ದಾರೆ.

## ನಂಬಿಕೆ, ಸಂಪ್ರದಾಯ, ಆಚರನೆ ಮತ್ತು ಜಾತ್ರೆ:-

ಸಂಸ್ಕೃತಿಯ ಬೆಳವಣಿಗೆಯಲ್ಲಿ ಜಾನಪದ ಪ್ರಮುಖ ಪಾತ್ರವನ್ನು ವಹಿಸಿದೆ. ಆದ್ದರಿಂದ ಜಾನಪದವನ್ನು ಒಳಗೊಳ್ಳದೆ ಸಂಸ್ಕೃತಿಯ ಸಮಗ್ರತೆಯನ್ನು ಪಡೆಯಲು ಸಾಧ್ಯವಿಲ್ಲ. ಜಾನಪದ ಸ್ವತಂತ್ರವಾಗಿ ಬೆಳೆದು ಬಂದ ಒಂದು ಶಾಸ್ತ್ರ ಜನಪದ (fulk) ಕ್ಕೆ ಸಂಬಂಧಿಸಿದುದೆಲ್ಲವೂ ಜಾನಪದದ ವ್ಯಾಪ್ತಿಗೆ ಒಳಪಡುತ್ತದೆ. **Fulk** ಮತ್ತು **lore** ಗಳ ಸಂಬಂಧವನ್ನು ಪರೀಕ್ಷಿಸಿದಾಗ ಆ ವಿಷಯದ ಪರಿಮಿತಿಯೂ ಸ್ಪಷ್ಟವಾಗುತ್ತದೆ. ಆದುದರಿಂದ ಜನಪದ ಸಂಸ್ಕರತಿಯನ್ನು ಪರಿಚಯ ಮಾಡಿಕೊಳ್ಳಬೇಕಾದರೆ ಜಾನಪದದ ವಿವಿಧ ಮುಖಗಳನ್ನು ಪರಿಶೀಲಿಸಬೇಕಾದರೆ ಜಾನಪದದ ವಿವಧ ಮುಖಗಳನ್ನು ಪರಶೀಲಿಸಬೇಕಾಗುತ್ತದೆ. ಜನಪದದ ನಂಬಿಕೆ ಸಂಪ್ರದಾಯ ಆಚರಣೆ ಮತ್ತು ಜಾತ್ರೆ ಇವುಗಳು ಜನಪದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ.

(ಎ) ನಂಬಿಕೆ ಮತ್ತು ಸಂಪ್ರದಾಯಗಳು.

ನಂಬಿಕೆಯಿಲ್ಲದೆ ಮನುಷ್ಯನಿಲ್ಲ, ಸಮಾಜವಿಲ್ಲ, ದೇಶವಿಲ್ಲ ಕೊನೆಗೆ ಇದೇ ವಿಶ್ವವೇ ಒಂದಲ್ಲ ಒಂದು ನಂಬಿಕೆಗಳ ಅಡಿಯಲ್ಲಿ ಬಾಳಿ ಬದುಕುತ್ತಿದೆ ಎಂದರೆ ತಪ್ಪಿಲ್ಲ. ಭೂತ, ವರ್ತಮಾನ, ಭವಿಷ್ಯತ್ ಕಾಲಗಳಿಗೆ ಸಂಬಂದಿಸಿದಂತೆ ಸಂಬಂಧವನ್ನು ಸೂಚಿಸುವ ಕಲ್ಪನೆಯನ್ನೇ ನಂಬಿಕೆ ಎಂದು ಕರೆಯಲಾಗಿದೆ.

ಮನುಷ್ಯನ ಕ್ರಿಯಾಶೀಲ ಚಟುವಟಿಕೆಗಳಿಗೆಲ್ಲ ನಂಬಿಕೆಯೇ ಕಾರಣವಾಗಿರುತ್ತದೆ. ಒಂದು ವರ್ಗ ಪರಂಪರಾಗತವಾಗಿ ಒಪ್ಪಿರುವ ಮಾನವನ ಕ್ರಿಯಾ ವಿನ್ಯಾಸವನ್ನು ಸಂಪ್ರದಾಯ ಎಂದು ಕರೆಯಬಹುದು. ಈ ಸಂಪ್ರದಾಯ ವೈಯುಕ್ತಿಕವಾದುದಲ್ಲ. ಸಾಮೂಹಿಕವಾದುದು. ಜನರು ಏನು ಮಾಡಬೇಕೆಂದು ತಿಳಿದಿದ್ದಾರೋ ಅದೇ ನಂಬಿಕೆ ಜನಪರರು ಆಚರಿಸುವ ಎಲ್ಲಾ ಸಾಂಸ್ಕೃತಿಕ ಆಚರಣೆಗಳಿಗೆ ನಂಬಿಕೆಯೇ ಜೀವಾಳ. ನಂಬಿಕೆಯೆಂಬುದು ಕೇವಲ ಅನಕ್ಷರಸ್ಥ ಸಮಾಜದ ಮೂಢ ನಂಬಿಕೆಗಳೆಂದು ಅಲ್ಲಗಳೆಯುವಂತಿಲ್ಲ. ಮಾನವನ ಆಲೋಚನಾಶಕ್ತಿ ವಿಕಾಸವಾದಂತೆಲ್ಲ ಅವನ ನಂಬಿಕೆಗಳು ವಿಕಾಸಗೊಂಡು ಸಾಮಾಜಿಕ, ದಾರ್ಮಿಕ, ಸಾಂಸ್ಕೃತಿಕ, ವೈಯುಕ್ತಿಕ ೆಂಬ ನಂಬಿಕೆಗಳು ಬೆಳೆದು ಬಂದಿವೆ.

"ನಂಬಿಕೆಗಳ ಹುಟ್ಟಿಗೆ ಆದಿ ಮಾನವನು ನೈಸರ್ಗಿಕ ಚೇಷ್ಟೆಗಳ ಬಗೆಗೆ ತಾಳಿದ ಮನೋಭಾವವೇ ಕಾರಣವಾಗಿರಬೇಕೆಮದು ದೇ.ಜ.ಗೌ ಅಭಿಪ್ರಾಯಪಟ್ಟಿದ್ದಾರೆ." ಮನುಷ್ಯನನ್ನು ಕಾಡುತ್ತಿದ್ದ ಅನೇಕ ಸಮಸ್ಯೆಗಳಿಗೆ ಕಾರಣ ತಿಳಿಯದೆ ತನ್ನ ಅನುಭವದ ಮಿತಿಯಲ್ಲಿ ಕಲ್ಪನೆಗಳನ್ನು ಕಟ್ಟಿಕೊಂಡ ಪರಿಣಾಮವಾಗಿ ಅನೇಕ ಮೂಡ ನಂಬಿಕೆಗಳಿಗೆ ಶರಣಾಗಿರುವ ಸಂಭವವಿದೆ. ಹೀಗಾಗಿ ಜನಪದ ನಂಬಿಕೆಗಳು ವ್ಯಾಪಕವಾಗಿವೆ.

ಪ್ರಸ್ತುತ ಬೆಳ್ಳೂರಿನ ಪ್ರದೇಶಕ್ಕೆ ಸಂಬಂಧಿಸಿದ ಕೆಲವು ನಂಬಿಕೆಗಳು ಇನ್ನೂ ಉಳಿದಿವೆ. ಅವುಗಳನ್ನು ನಂಬಿಕೆಗಳೆಮದು ಕರೆಯಲಾಗದಿದ್ದರೂ ಇಲ್ಲಿನ ಪರಿಸರದಲ್ಲಿ ಹೊಂದಿಕೊಂಡಿವೆ. ಇಲ್ಲಿನ ಕೆಲವು ನಂಬಿಕೆಗಳೆಂದರೆ.

೧. ಮನೆಯಿಂದ ಹೊರಗೆ ಹೊರಡುವಾಗ ಎಲ್ಲಿಗೆ ಎಂದು ಕೇಳಬಾರದು
೨. ಮಂಗಳವಾರ ಕ್ಷೌರ ಮಾಡಿಸಬಾರದು
೩. ಹೆಂಡತಿ ಗರ್ಭಿಣಿಯಾಗಿದ್ದಾಗ ಗಂಡನಾದವನು ಗಡ್ಡಬೋಳಿಸ ಬಾರದು
೪. ಕೊಂಡ ಆಯ್ದರೆ ಒಳ್ಳೆಯದಾಗುತ್ತದೆ
೫. ಬಾಯಿ ಬೀಗ ಹಾಕಿಸಿಕೊಂಡು ಹರಕೆ ತಿರಿಸಿದರೆ ಮುಂದೆ ಯಾವುದೇ ತೊಂದರೆ ಭರುವುದಿಲ್ಲ
೬. ಸೋಮನ ಕೈನ ಚಾಟಿ ಏಟಿನಿಂದ ಭಯ ಮಾಯವಾಗುತ್ತದೆ.
೭. ಪ್ರಯಾಣ ಹೊರಟಾಗ ಒಂಟಿ ಬ್ರಾಹ್ಮಣ ಎದುರಾದರೆ ಅಪಶಕುನ, ಜೋಡಿ ಬ್ರಾಹ್ಮಣರು ಎದುರಾದರೆ ಶುಭವಾಗುತ್ತದೆ.
೮. ಬೆಕ್ಕುಗಳು ಜಗಳವಾಡಿದರೆ ಅಪಶಕುನ
೯. ಮನೆಮೇಲೆ ಗೂಬೆ ಕುಳಿತು ಕೂಗಬಾರದು
೧೦. ಶುಕ್ರವಾರ ಹಣವನ್ನು ಯಾರಿಗೂ ಕೊಡಬಾರದು
೧೧. ಹರಕೆ ತೀರಿಸದಿದ್ದರೆ ಒಲ್ಲೆಯದಾಗುವುದಿಲ್ಲ
೧೨. ಜೀವನದಲ್ಲಿ ಒಂದು ಬಾರಿಯಾದರೂ ತೀರ್ಥಯಾತ್ರೆ ಕೈಗೊಳ್ಳಬೇಕು

ಮುಂತಾದ ನಂಬಿಕೆಗಳು ಜನರ ಮನಸ್ಸಿನಲ್ಲಿ ಆಳವಾಗಿ ಬೇರೂರಿವೆ. ಇವು ಅನಕ್ಷರಸ್ಥರಲ್ಲಿ ಮಾತ್ರವಲ್ಲ ಇತ್ತೀಚೆಗೆ ಅಕ್ಷರಸ್ಥರಲ್ಲಿಯೇ ಹೆಚ್ಚಾಗುತ್ತಿದೆ. ಈ ನಂಬಿಕೆಗಳಿಗೆ ವಿರುದ್ಧವಾಗಿ ನಡೆದರೆ

ತೊಂದರೆ ಯಾಗುತ್ತದೆ ಎಂಬ ಭಯ ಅಕ್ಷರಸ್ಥರನ್ನು ಕಾಡುತ್ತದೆ. ಆದರೂ ಇವೆಲ್ಲ ಒಂದು ಸಂಸ್ಕರತಿಯ ಭಾಗವಾಗಿ ಉಳಿದಿವೆ.

ಆಚರಣೆಗಳು:-

ಮನುಷ್ಯನ ಜೀವನವನ್ನು ರೂಪಿಸುವಲ್ಲಿ ಸಂಸ್ಕೃತಿಯನ್ನು ಪೋಷಿಸುವುದರಲ್ಲಿ ಆಚರನೆಗಳು ಮಹತ್ವದ ಪಾತ್ರವನ್ನು ವಹಿಸುತ್ತದೆ. ಮಾನವನ ಜೀವನದ ಅವಿಭಾಜ್ಯ ಅಂಗಗಳಾಗಿ ಆಚರನೆಗಳು ಬೆಳೆದು ಸಂಪ್ರದಾಯವಾಗಿ ಮಾರ್ಪಡುತ್ತವೆ. ವೈಯುಕ್ತಿಕವಾಗಿ ರೂಪತಾಳುವ ಆಚರನೆ ಸಾಮೂಹಿಕವಾದ ಮಹತ್ವವನ್ನು ಗಳಿಸಿಕೊಳ್ಳುತ್ತದೆ. ಆದ್ದರಿಮದ ಬೆಳ್ಳುರಿನಲ್ಲಿ ನಡೆಸುವ ಕೆಲವು ಆಚರಣೆಗಳನ್ನು ಗಮನಿಸಲಾಗಿದೆ.

೧. ಎಲ್ಲಮ್ಮ ದೇವಿ, ದೊಡ್ಡಮ್ಮ ದೇವಿ, ಚಿಕ್ಕಮ್ಮ ದೇವಿ ಉತ್ಸವ.

ಸುಗ್ಗಿಯ ಕಾಲದ ನಂತರ ರೈತರು ಈ ಉತ್ಸವವನ್ನು ಆಚರಿಸುತ್ತಾರೆ. ಅದರಲ್ಲೂ ಯುಗಾದಿ ಹಬ್ಬದ ನಂತರ ಈ ಉತ್ಸವಗಳನ್ನು ಆಚರಿಸುತ್ತಾರೆ. ಊರಿನ ಮಧ್ಯ ಭಾಗದಲ್ಲಿ ಈ ದೇವಾಲಯವಿದೆ. ಇವು ಈ ಊರಿನ ಶಕ್ತಿದೇವತೆಗಳಾಗಿವೆ. ಎಲ್ಲಮ್ಮ ದೇವಿಯ ದೇವಾಲಯವು ಮಾತ್ರ ಇದ್ದು ಇದರಲ್ಲಿಯೇ ದೊಡ್ಡಮ್ಮ, ಚಿಕ್ಕಮ್ಮ ದೇವಿಯ ಮೆರಗ್ರವಿಗ್ರಹಗಳಿವೆ. ಇವುಗಳ ಮೂಲ ದೇವಾಲಯ ಬೆಳ್ಳೂರಿನ ಪೂರ್ವಕ್ಕೆ ಒಂದು ಕಿ.ಮೀ. ದೀರದಲ್ಲಿರುವ ವಡ್ಡರ ಹಳ್ಳಿಯಲ್ಲಿದೆ. ಅಲ್ಲಿ ಮೂಲ ವಿಗ್ರಹವಿದ್ದು ಮೆರವನಿಗೆ ವಿಗ್ರಹಗಳನ್ನು ಉತ್ಸವದ ಸಂದರ್ಭದಲ್ಲಿ ತೆಗೆದು ಕೊಂಡು ಹೋಗಿ ನಂತರ ಎಲ್ಲಮ್ಮ ದೇವಿಯ ದೇವಾಲಯದಲ್ಲಿಯೇ ತಂದಿರಿಸುತ್ತಾರೆ.

ಉತ್ಸವ ಮೂರು ದಿನಗಳ ಕಾಲ ನಡೆಯುತ್ತದೆ. ಉತ್ಸವದ ಮೊದಲದಿನ ನಡೆಮುಡಿಯಲ್ಲಿ ದಾಸನ ಕೆರೆಯಿಂದ ಗಂಗೆ ತರುವ ಪದ್ಧತಿ ಇದೆ. ಈ ಮೂರು ದಿನಗಳಿಗಿಂತ ಕಂಬ ತರುವ ವಾಡಿಕೆ ಇದೆ. ಕಂಬ ತರುವುದೆಂದರೆ ಇದನ್ನು ತಂದ ಹದಿನೈದು ದಿನದಲ್ಲಿ ಹಬ್ಬ ನಡೆಯುತ್ತದೆ ಎಂಬ ಪ್ರಚಾರ ಪದ್ಧತಿ ಮದುವೆ ಯಾಗದೆ ಇರುವ ವ್ಯಕ್ತಿ ಕಂಬ ತರುವ ಕೆಲಸ ಮಾಡುತ್ತಾನೆ. ದೆವಾಲಯದ ಕಮಿಟಿಯವರ ತೀರ್ಮಾನದಂತೆ ಯಾರು ಕಂಬ ತರಬೇಕೆಂದು ನಿರ್ದರಿಸುತ್ತಾರೆ. ತೀರ್ಮಾನಿಸಿದ ನಂತರ ದಾಸನಕೆರೆಯಲ್ಲಿ ಗಂಗೆ ಪೂಜೆಯನ್ನು ಮಾಡಿ ಜೊತೆಯಲ್ಲಿ ಬಾಳೆ ಕಂಬ,

ಮಾವಿನ ಸೊಪ್ಪು ಅತ್ತಿ ಮರದ ಒಂದು ಸಣ್ಣ ಕೊನೆಯನ್ನು ತರುತ್ತಾರೆ. ಇವುಗಳನ್ನು ರಂಗಕ್ಕೆ ಬಿಗಿಯುತ್ತಾರೆ. ಅಂದಿನಿಂದ ತಮಟೆ ವಾದ್ಯಗಳ ಸಮೇತ ರಂಗ ಕುಣಿಯುವ ಪದ್ಧತಿ ಹದಿನೈದು ದಿನಗಳ ವರೆಗೆ ನಡೆಯುತ್ತದೆ. ಉತ್ಸವ ಮೂರು ದಿನಗಳ ಕಾಲ ನಡೆಯುತ್ತದೆ. ಮೊದಲನೆ ದಿನ ಜಾಗಾರ ಎಂದರೆ ಅಕ್ಕಪಕ್ಕದ ಹಳ್ಳಿಗಳಿಂದ ರಂಗಕುಣಿಯುವ ತಂಡಗಳು ಅಂದು ಇಲ್ಲಿ ತಮ್ಮ ಪ್ರದರ್ಶನ ತೋರಿಸುತ್ತಾರೆ. ನಂತರ ಎರಡನೆ ದಿನ ಮಡೆ ಅನ್ನ ಆರತಿಯನ್ನು ಉತ್ಸವದ ಜೊತೆಯಲ್ಲಿ ವಡ್ಡರಹಳ್ಳಿಗೆ ತೆಗೆದು ಕೊಂಡು ಹೋಗಿ ಪೂಜೆ ಸಲ್ಲಿಸಿ ಹಿಂದಿರುಗುತ್ತಾರೆ. ಮೂರನೆಯದಿನ ದೊಡ್ಡಮ್ಮ ಚಿಕ್ಕಮ್ಮ ದೇವಿಯವರಿಗೆ ಆಡು, ಕುರಿ – ಕೋಳಿ ಬಲಿ ಕೊಡುವ ಪದ್ಧತಿ ರೂಡಿಯಲ್ಲಿದೆ.

ಇತ್ತೀಚೆಗೆ ವ್ಯವಸಾಯ ಪ್ರಧಾನವಾಗಿದ್ದ ಬೆಳ್ಳೂರು ವ್ಯಾಪಾರ, ವಾಣಿಜ್ಯ ಕೇಂದ್ರವಾಗಿ ಬದಲಾವಣೆಗೊಂಡಿದೆ. ಅಕ್ಷರಸ್ಥರ ಸಂಖ್ಯೆ ಹೆಚ್ಚಿದಂತೆ ಆಚರನೆಯ ವಿಧಾನ ಕೇವಲ ಒಂದೇ ದಿನಕ್ಕೆ ಇಳಿದಿದೆ. ಹಿಂದಿನ ಸಂಪ್ರದಾಯಗಳನ್ನು ಉಳಿಸಿ ಬೆಳೆಸಬೇಕೆಂದು ಇಲ್ಲಿನ ಜನರ ಆಶಯವಾಗಿದೆ. ಆದರೆ ಅದು ಸಾದ್ಯವಾಗುತ್ತಿಲ್ಲ.

ಜಾತ್ರೆಗಳು:-

ದಕ್ಷಿಣ ಕರ್ನಾಟಕದಲ್ಲಿನ ಜಾತ್ರೆಗಳು ಪ್ರಾದೇಶಿಕ ವೈವಿಧ್ಯತೆಯಿಂದ ಕೂಡಿದ್ದರೂ, ಆಚರಣೆಯ ಆಶಯಗಳು ಮುಖ್ಯವಾಗಿ ಕನ ಸಮೂಹದ ಕಲ್ಯಾಣಕ್ಕಾಗಿ ಮತ್ತು ಸಾಂಸ್ಕೃತಿಕ, ವಾಣಿಜ್ಯ ವಹಿವಾಟುಗಳ ಕೊಡು ಕೊಳ್ಳುವಿಕೆಯ ಸಾರ್ವಜನಿಕ ಸಂಭ್ರಮದಲ್ಲಿ ಕೂಡು ವೇದಿಕೆಗಳಾಗಿರುತ್ತವೆ. ಜಾತ್ರೆ ಎಂದಾಕ್ಷಣ ಕಾಣುವ ದೃಶ್ಯಗಳು ಜನರು ಸೇರುವ ತಾಣ. ಕ್ರಯ – ವಿಕ್ರಯಗಳು ದೃಶ್ಯ – ಶ್ರವ್ಯ, ಮಾದ್ಯಮಗಳು, ಮಕ್ಕಳ ಆಟಿಕೆ ವಸ್ತುಗಳು; ಕಲೆಗಳ ಸಾಂಸ್ಕೃತಿಕ ಪ್ರದರ್ಶನಗಳು ಮುಂತಾದ ದೃಶ್ಯಗಳನ್ನು ಕಾಣಬಹುದು.

ಜಾತ್ರೆಗಳಲ್ಲಿ ವಿಶೇಷವಾಗಿ ಗಮನಿಸಬಹುದಾದದ್ದು ದೇವರ ತೇರು, ಹರಕೆ,. ಬೆಳ್ಳೂರಿನಲ್ಲಿ ಮಾದವರಾಯ ರಥ ಎಳೆಯುವುದೆಂದರೆ ಹರಕೆ ತೀರಿಸಿದಂತೆ ಎಂದು ಜನರ ಅಭಿಪ್ರಾಯ. ಜನವರಿ ಅಥವಾ ಪ್ರೆಬ್ರವರಿ ತಿಂಗಳಲ್ಲಿ ಈ ಜಾತ್ರೆ ನಡೆಯುತ್ತದೆ. ಜಾತ್ರೆ ನಡೆಯಲು ಹದಿನೈದು ದಿನಗಳಿರುವಂತೆ ರಥವನ್ನು ದೇವಾಲಯದ ಮುಂದೆ ಎಳೆದು ತಂದು ನಿಲ್ಲಿಸುತ್ತಾರೆ. ಇದನ್ನು ಬೆಳ್ಳೂರು ಮತ್ತು ಅದರ ಸುತ್ತ ಮುತ್ತಲ ಹಳ್ಳಿಗಳಲ್ಲಿ ಗಾಲಿಗಳನ್ನು ಹೊರ ಕಾಹಿದ್ದಾರೆ ಎಂದು

ಹೇಳುತ್ತಾರೆ. ಗಾಲಿಗಳನ್ನು ಹೊರ ಹಾಕಿದ ದೇವಾಲಯದಲ್ಲಿನ ಪ್ರತಿದಿನ ವಿಶೇಷ ಪೂಜೆ ನಡೆಯುತ್ತವೆ. ಸುತ್ತಮುತ್ತಲ ಗ್ರಾಮಗಳಲ್ಲಿ ಭಕ್ತಿ ಭಾವಗಳಿಂದ ನಾಗರ ಹಬ್ಬವನ್ನು ಆಚರಿಸುತ್ತಾರೆ. ಇದು ಬಹಳ ಶೇಷ್ಠವಾದ ಹಬ್ಬವಾಗಿರುತ್ತದೆ.

ಜಾತ್ರೆಯ ದಿನ ರಥವನ್ನು ವಿವಿದ ಅಲಂಕಾರಗಳಿಂದ ಶೃಂಗರಿಸಿ ಬೀದಿಗಳಲ್ಲಿ ಎಳೆಯಲು ಪ್ರಾರಂಬಿಸುತ್ತಾರೆ. ಇದು ಜನರಿಗೆ ಸಂತೋಷ ಸಡಗರವನ್ನುಂಟು ಮಾಡುತ್ತದೆ. ರಥವನ್ನು ಎಳೆಯಲು ಧರ್ಮ ಬೇಧವಿಲ್ಲದೆ ಹಿಂಧೂ, ಮುಸ್ಲಿಂ, ಜೈನ ಧರ್ಮದವರೆಲ್ಲ ಸೇರಿ ಎಳೆಯುತ್ತಾರೆ. ಈ ಊರು ಸರ್ವ ಧರ್ಮ ಸಹಿಷ್ಣತೆಯ ಊರಾಗಿದೆ. ಆದ್ದರಿಂದ ಎಲ್ಲರೂ ಸೇರಿ ಆಚರಿಸುತ್ತಾರೆ. ಗ್ರಾಮದಲ್ಲಿನ ಸಾಮಾಜಿಕ, ಆರ್ಥಿಕ ಅಭಿವೃದ್ಧಿಗಾಗಿ ದುಷ್ಟಶಕ್ತಿಗಳು ದೂರವಾಗಲೆಂದು ಹಾಗು ಲೆಕ್ಕವಿಲ್ಲದಷ್ಟು ನಂಬಿಕೆಗಳು ಅಡಕವಾಗಿರುತ್ತವೆ.

## ಉತ್ಸವ

ಮಾಘ ಶುದ್ದದಲ್ಲಿ ಬರುವ ಪುಶ್ಯ ನಕ್ಷತ್ರದಂದು ಆದಿಮಾದವರಾಯ ಸ್ವಾಮಿಯ ಬ್ರಹ್ಮ ರಥೋತ್ಸವ ವಿಜೃಂಬಣೆಯಿಂದ ನಡೆಯುತ್ತದೆ. ರಥೋತ್ಸವ ನಡೆಯುವ ಕೆಲವು ದಿನಗಳ ಮೊದಲೇ ರಥವನ್ನು ದೇವಸ್ಥಾನದ ಮುಂಭಾಗಕ್ಕೆ ಎಳೆದು ನಿಲ್ಲಿಸುತ್ತಾರೆ. ಇದನ್ನು ಗಾಲಿ ಹೊರ ಹಾಕುವುದು ಎಂದು ಕರೆಯುತ್ತಾರೆ. ಗಾಲಿ ಹೊರಹಾಕುವುದೆಂದರೆ ರಥೋತ್ಸವ ಪ್ರಚಾರವಿದ್ದಂತೆ. ಗಾಲಿ ಹೊರಹಾಕಿದ ಮೇಲೆ ಬೆಳ್ಳೂರು ಹಾಗು ಸುತ್ತ ಮುತ್ತಲ ಹಳ್ಳಿಗಳಲ್ಲಿ ಯಾವುದೇ ಶುಭ ಕಾರ್ಯಗಳು ನಡೆಯುವಂತಿಲ್ಲ. ಮನೆಗಳಲ್ಲಿ ಮೆಣಸಿನ ಕಾಯಿ ಸುಟ್ಟು ಘಾಟು ಬರುವಂತಿಲ್ಲ. ಅವಲಕ್ಕಿಯಿಂದ ಯಾವುದೇ ತಿಂಡಿ ತೀರ್ಥಗಳನ್ನು ಮಾಡುವಂತಿಲ್ಲ. ಎಂಬ ಗ್ರಾಮೀಣ ನಿಬಂಧನೆ ಇದೆ. ಇದನ್ನು ಇನ್ನೂ ಕೆಲವರು ಚಾಚು ತಪ್ಪದೆ ನಡೆಸಿಕೊಂಡು ಬರುತ್ತಿದ್ದಾರೆ. ಸುತ್ತ ಮುತ್ತಲ ಗ್ರಾಮಗಳಲ್ಲಿ ಗಾಲಿ ಕೊರಹಾಕಿದ ಮೇಲೆ ನಾಗರ ಹಬ್ಬವನ್ನು ಬಹಳ ಭಕ್ತಿ ಭಾವಗಳಿಂದ ಆಚರಿಸುತ್ತಾರೆ. ಇಷ್ಟೆಲ್ಲ ಆದಮೆಲೆ ರಥೋತ್ಸವದ ದಿನವಾದ ಬೆಳಗ್ಗೆ ಮಡಿ ಥೇರನ್ನು ಸ್ವಲ್ಪ ದೂರ ಎಳೆದು ನಿಲ್ಲಿಸುತ್ತಾರೆ. ನಂತರ ಅದೇ ದಿನ ರಾತ್ರಿ ೭ ಗಂಟೆಯ ನಂತರ ಮತಧರ್ಮ ಬೇದವಿಲ್ಲದೆ ಬೆಳ್ಳೂರಿನ ಬೀದಿಗಳಲ್ಲಿ ಸರ್ವಾಲಂಕೃತ ರಥವನ್ನು ಎಲೆಯುತ್ತಾರೆ.

ವಿಜಯದಶಮಿಯಂದು ಮಾಧವರಾಯ ಸ್ವಾಮಿಯ ಉತ್ಸವ ನಡೆಯುತ್ತದೆ. ಹೊಯ್ಸಳ ಕಾಲದಲ್ಲಿ ನಿರ್ಮಾಣವಾದ ಮೂಲ ಸಿಂದೇಶ್ವರ ದೇವಸ್ಥಾನದ ಪಕ್ಕದಲ್ಲಿ ಒಂದು ಕೊಳವನ್ನು

ನಿರ್ಮಿಸಿದ್ದಾರೆ. ಆ ಕೊಳವನ್ನು ಅಂದಿನಿಂದ ಗೌರಿ ಗಣೇಶ ಹಬ್ಬದ ಸಂಧರ್ಭದಲ್ಲಿ ಈ ಗೌರಿ ಕೊಳದ ತಳಭಾಗದಿಂದ ಮೃದುವಾದ ಮಣ್ಣನ್ನು ತಂದು ಆ ಮಣ್ಣಿನಿಂದ ಗೌರಿಯ ಆಕಾರ ಬರುವಂತೆ ಒಂದು ವಿಗ್ರಹ ಮಾಡುತ್ತಿದ್ದರು. ಈ ವಿಗ್ರಹ ಹಾಗೂ ಮಣ್ಣಿನಿಂದ ಮಾಡಿದ ಗಣೇಶ ವಿಗ್ರಹಕ್ಕೆ ಪೂಜೆ ಪುರಸ್ಕಾರಗಳು ಮೂರು ದಿನಗಳ ಕಾಲ ನಡೆಯುತ್ತಿತ್ತು. ಮೂರು ದಿನಗಳ ನಂತರ ಈ ಎರಡನ್ನು ಭಕ್ತಿ ಭಾವಗಳಿಂದ ಗೌರಿಕೊಳದಲ್ಲಿ ವಿಸರ್ಜಿಸುತ್ತಿದ್ದರು. ಆದರೆ ಆ ಸಂಪ್ರದಾಯ ಇಂದು ಅಳಿಸಿ ಹೋಗಿದೆ. ಈಗ ಗಣೇಶ ಉತ್ಸವ ಮಾತ್ರ ನಡೆಯುತ್ತಿದ್ದು. ಅದನ್ನು ದಾಸನ ಕೆರೆಯಲ್ಲಿ ವಿಸರ್ಜಿಸುತ್ತಾರೆ.

ವಿಜಯದಶಮಿಯಂದು ಮಾಧವರಾಯ ಸ್ವಾಮಿಯನ್ನು ಗೌರಿ ಕೊಳದ ಹತ್ತಿರ ತಂದು ಮಂಟಪದಲ್ಲಿ ಕೂರಿಸುತ್ತಾರೆ. ಇಲ್ಲಿ ಗಜೇಂದ್ರ ಮೋಕ್ಷ, ತೀರ್ಥಸ್ನಾನ, ತೆಪ್ಪೋತ್ಸವ ಕಾರ್ಯ ಮುಗಿದ ಮೇಲೆ ಆದಿಚುಂಚನಗಿರಿಗೆ ಹೋಗುವ ಮಾರ್ಗದಲ್ಲಿ ವಿಜಯದಶಮಿ ಮಂಟಪದ ಹತ್ತಿರ ತೆಗೆದು ಕೊಂಡು ಹೋಗಿ ಪೂಜೆ ಸಲ್ಲಿಸಿ ಹಿಂತಿರುಗುತ್ತಾರೆ.

ಅದೇ ವಿಜಯದಶಮಿಯಂದು ವಿಮಲನಾಥನನ್ನು ಸಹ ಜೈನ ಧರ್ಮದವರು ಬೆಳ್ಳೂರಿನ ಬೀದಿಗಳಲ್ಲಿ ಉತ್ಸವ ಮಾಡಿ ಪೂಜೆ ಪುರಸ್ಕಾರಾದಿಗಳು ಮುಗಿದ ಮೇಲೆ ಬಸದಿಗೆ ಹಿಂದಿರುಗುತ್ತಾರೆ.

ಸಂಕ್ರಾಂತಿ ಹಬ್ಬದಂದು ಸಹ ಆದಿಮಾದವರಾಯಸ್ವಾಮಿ ಉತ್ಸವವು ಲಕ್ಷೀಪುರದ ಬಳಿಯಿರುವ ಉತ್ಸವ ಮಂಟಪ ಬಳಿಗೆ ಹೋಗಿ ಪೂಜೆಸಲ್ಲಿಸುತ್ತಾರೆ. ಅದೇ ದಿನ ವಿಮಲನಾಥನನ್ನು ಸಹ ಉತ್ಸವದಲ್ಲಿ ಕೊಂಡೊಯ್ದು ಬೆಳ್ಳೂರಿನ ಬೀದಿಗಳಲ್ಲಿ ಮೆರವಣಿಗೆ ಮಾಡಿ ಹಿಂದಿರುಗುತ್ತಾರೆ.

ಸಂಪ್ರದಾಯದಂತೆ ಮಾಧವರಾಯಸ್ವಾಮಿ ಮತ್ತು ವಿಮಲನಾಥ ಉತ್ಸವಗಳು ಏಕಕಾಲದಲ್ಲಿ ನಡೆಯುವುದಿಲ್ಲ. ಬೆಳ್ಳೂರಿನ ಮಹಾಜನಗಳಲ್ಲಿ ಆದ ಒಪ್ಪಂದದಂತೆ ಬೇರೆ ಬೇರೆ ಅವಧಿಯಲ್ಲಿ ಈ ಉತ್ಸವಗಳು ನಡೆಯುತ್ತವೆ.

# ಅಧ್ಯಾಯ – ೨

## ಪ್ರದರ್ಶನ ಕಲೆಗಳು:-

ಮಾನವನ ಬಾಷೆಗಿಂತಲೂ ಮೊದಲು ತನ್ನ ಭಾವನೆಗಳನ್ನು ಇನ್ನೊಬ್ಬರಿಗೆ ತಿಳಿಸುವುದಕ್ಕೆ ಆಂಗಿಕವಾದ ಸಂಕೇತ ಮತ್ತು ಕುಣಿತಗಳನ್ನೇ ಆಶ್ರಯಿಸಿದ್ದನೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಮನುಷ್ಯರ ಭಾವನೆಗಳನ್ನು ತಿಳಿಸುವುದಕ್ಕೆ ಅಭಿನಯ ಪೂರಕವಾದ ಭಾಷೆ ಹೆಚ್ಚು ಪರಿಣಾಮಕಾರಿಯಾಯಿತು. ಮನುಷ್ಯ ಜೀವನದಲ್ಲಿ ಸುಖ – ಸಂತೋಷ, ನೋವು – ನಲಿವುಗಳು ಮಾತ್ರವಲ್ಲದೆ ಪುರಾಣ, ಇತಿಹಾಸ ಮತ್ತು ಪರಂಪರೆಯಲ್ಲಿನ ಘಟನಾವಳಿಗಳು ಜನಪದ ಜೀವನದಲ್ಲಿ ಕಲೆಗಳ ಮೂಲಕ ಪ್ರಕಟವಾಗಿದೆ.

ಪ್ರದರ್ಶನ ಕಲೆಗಳೆಂದರೆ ಜನಸಮ್ಮುಖದಲ್ಲಿ ಅನಾವರಣಗೊಂಡು ಆ ಮೂಲಕ ಜನರನ್ನು ಆಕರ್ಷಣೆ ಮಾಡುವ ಕಲ ಪ್ರಕಾರವಾಗಿವೆ. ಜನಪದ ಕಲೆಗಳನ್ನು ಉಳಿಸಿ – ಬೆಳೆಸಿ ನಾಗರೀಕತೆ ಬೆಳೆದಂತೆಲ್ಲ ಕಲೆಯ ಪ್ರಕಾರಗಳು, ಶೈಲಿಗಳು, ವೈವಿಧ್ಯ ಮಯವಾಗಿ ಬೆಳೆದವು. ಸಾಹಿತ್ಯ ಮತ್ತು ಸಂಸ್ಕೃತಿಗಳಲ್ಲಿಯಂತೆ ಕಲೆಗಳಲ್ಲೂ ಸಹ ಶಿಷ್ಟ ಕಲೆಗಳು ಮತ್ತು ಜನಪದ ಕಲೆಗಳೆಂದು ಎರಡು ರೀತಿಯಾಗಿ ವಿಂಗಡಿಸಲಾಗಿದೆ.



ಜನಪದ ಕಲೆಗಳು "ಕಲೆಗಾಗಿ ಕಲೆ" ಎಂಬ ಪರಿಕಲ್ಪನೆಯನ್ನು ಹೊಂದಿರುತ್ತದೆ. ಜನಪದ ಕಲೆಗಳು ಜನ ಸಮುದಾಯದ ನಡುವೆಯೇ ಹುಟ್ಟಿ ಬೆಳೆದು ಅವರ ಬದುಕಿನ ಭಾಗವಾಗಿರುತ್ತವೆ. ಕಲೆಗಳು ಬೌಗೋಳಿಕ, ಸಾಮಾಜಿಕ, ಧಾರ್ಮಕ, ಆರ್ಥಿಕ ಕಾರಣಗಳಿಂದಾಗಿ ಕಲೆಗಳೂ ವೈವಿಧ್ಯ ಪೂರ್ಣವಾಗಿರುತ್ತವೆ. ಕೆಲವು ಒಂದೇ ರೂಪದ ಕಲೆಯಾಗಿದ್ದರೂ ಅವು ಪ್ರದರ್ಶನಗೊಳ್ಳುವ ರೀತಿ, ಕಾಲ, ಭಾಷೆ ಮುಂತಾದ ಕಾರಣಗಳಿಂದಾಗಿ ವ್ಯತ್ಯಾಸಗಳು ಕಂಡು ಬರುತ್ತವೆ.

ಪ್ರಸ್ತುತ ಬೆಳ್ಳೂರಿನ ಪ್ರದರ್ಶನ ಕಲೆಗಳನ್ನು ದಕ್ಷಿಣ ಕರ್ನಾಟಕದ ಕಲೆಗಳ ಗುಂಪಿಗೆ ಸೇರಿಸಬಹುದು. ಇಲ್ಲಿನ ಕಲೆಗಳೆಂದರೆ ಸೂತ್ರದಗೊಂಬೆಯಾಟ, ಕೀಲುಕುದುರೆ, ಸೋಮನಕುಣಿತ, ಗಾರುಡಿಕುಣಿತ, ಯಕ್ಷಗಾನ, ಬಯಲು ನಾಟಕ, ತಮಟೆ ಬಾರಿಸುವುದು, ಬ್ಯಾಂಡ್ ಸೆಟ್, ರಂಗಕುಣಿತ ಮುಂತಾದ ಕಲೆಗಳನ್ನು ಕಾಣಬಹುದಾಗಿದೆ. ಇಲ್ಲಿನ ಕಲೆಗಳಲ್ಲಿ ಮುಖ್ಯವಾದುದೆಂದರೆ ಸೂತ್ರದ ಗೊಂಬೆಯಾಟ ಪ್ರದರ್ಶನ.

೧. ಸೂತ್ರದ ಗೊಂಬೆಯಾಟ:-

ಸುಮಾರು ೨೦೦ - ೪೦೦ ವರ್ಷಗಳಷ್ಟು ಇತಿಹಾಸವಿರುವ ಈ ಕಲೆ ಪುಟ್ಟಸ್ವಾಮಾಚಾರ್ಯರ ಹಾಗೂ ತಿಮ್ಮಪ್ಪಾಚಾರ್ಯರ ಅವಧಿಯಲ್ಲಿ ದೇಶ ವಿದೇಶಗಳಲ್ಲಿ ಪ್ರದರ್ಶನಗೊಂಡಿದೆ. ಈ ಕಲೆ ಇವರಲ್ಲಿ ರಕ್ತಗತವಾಗಿ ಬಂದಿದೆ. ತಂದೆ ಹಿರಣಾಚಾರಿ ತಾಯಿ ಕಾಳಮ್ಮ ನವರ ಪುತ್ರರಾಗಿ ಜನಿಸಿದರು. ಇದೊಂದು ಸಂಪ್ರದಾಯಸ್ಥ ಕುಟುಂಬ. ಇಂಥಹ ಕುಟುಂಬದಲ್ಲಿ ಜನಿಸಿದ ಪುಟ್ಟಸ್ವಾಮಾಚಾರರು ಬಾಲಕನಾಗಿದ್ದಾಗಲೆ ಜೇಡಿ ಮಣ್ಣಿನಿಂದ ಗಣಪತಿ ವಿಗ್ರಹ ಮಾಡುವುದರಿಂದ ಅವರ ಪ್ರತಿಭೆ ಪ್ರಾರಂಬವಾಯಿತು. ಅವರ ವಯಸ್ಸು ಹೇರಿದಂತೆ ಜ್ಞಾನಾರ್ಜನೆಯೂ ಬೆಳೆಯುತ್ತಾ ಬಂದಿತ್ತು. ನಂತರ ಗೊಂಬೆಯಾರಿಸುವುದನ್ನು ಕಲಿತರು. ರಟ್ಟನ್ನು ಕತ್ತರಿಸಿ ವಿವದ ಗೊಂಬೆಗಳನ್ನು ತಯಾರಿಸಿಕೊಂಡು ಮುಂದೆ ಇದೇ ತಮ್ಮ ಜೀವನದ ವೃತ್ತಿಯನ್ನಾಗಿಸಿಕೊಂಡರು. ಇದರ ಜೊತೆಗೆ ಚಿನ್ನ ಬೆಳ್ಳಿ ಕೆಲಸವನ್ನು ಕರಗತ ಮಾಡಿ ಕೊಂಡರು. ಇದಕ್ಕೆ ಪ್ರೋತ್ಸಾಹಕರಾಗಿ ಅವರ ತಂದೆ ನಿಂತರು. ಅವರ ತಂದೆ ಗೊಂಬೆ ನಾಟಕವಾಡಲು ಹೋಗುವಾಗ ಜೊತೆಯಲ್ಲಿ ಕರೆದುಕೊಂಡು ಹೋಗುತ್ತಿದ್ದರು. ಅಲ್ಲಿ ಹಿಮ್ಮೇಳಗಾಯಕರಾಗಿ ಗೊಂಬೆ ಕುಣಿಸುವ ಕಲೆಯನ್ನು ಅಭ್ಯಾಸ ಮಾಡಿಕೊಂಡರು.

ತಂದೆಯ ಮರಣದ ನಂತರ ತಾಯಿಯ ಆಶ್ರಯದಲ್ಲಿ ಬೆಳೆಯುತ್ತಾ ತಮ್ಮ ವೃತ್ತಿಯನ್ನು ಮುಂದು ವರಿಸಿಕೊಂಡು ಬಂದರು. ಹೆಚ್ಚು ಹೆಚ್ಚು ಪದರ್ಶನಗಳಿಂದ ಸೂತ್ರದ ಗೊಂಬೆಗಳು ಆಕಾರ ಮತ್ತು ಬಣ್ಣ ಕಳೆದು ಕೊಳ್ಳುತ್ತಾ ಬಂದವು ಆಗ ಪುಟ್ಟಸ್ವಾಮಾಚಾರ್ಯರು ಅವುಗಳಿಗೆ ಬಣ್ಣ ಹಚ್ಚುವ ಕೆಲಸ ಪ್ರಾರಂಬಿಸಿದರು. ನಂತರ ಹೊಸ ಮಾದರಿಯಲ್ಲಿ ಗೊಂಬೆ ತಯಾರಿಸುವುದನ್ನು ಕಲಿತರು. ಇದು ಅವರಿಗೆ ಮುಂದೆ ಸಹಕಾರಿಯಾಯಿತು.

ಬೆಳ್ಳೂರಿನಿಂದ ಶ್ರೀ ಆದಿಚುಂಚನಗಿರಿಗೆ ಹೋಗುವ ಮಾರ್ಗದಲ್ಲಿ ಅಂಬಲ ಜೀರಹಳ್ಳಿ ಎಂಬ ಗ್ರಾಮವಿದೆ. ಈ ಗ್ರಾಮ ಜಾನಪದದ ತೌರೂರೆನಿಸಿದೆ. ಈ ಗ್ರಾಮದಲ್ಲಿ ಹುಟ್ಟಿ, ಬೆಳೆದು ಕನ್ನಡನಾಡಿನ ಪ್ರಸಿದ್ಧ ಜಾನಪದ ವಿದ್ವಾಂಸರೆನಿಸಿದ ಜೀಶಂ ಪರಮಶಿವಯ್ಯ (ಜೀ.ಶಂ.ಪ) ನವರ ಕೊಡುಗೆ ಅಪಾರ. ಇವರ ಮಾರ್ಗದರ್ಶನದಲ್ಲಿ ಈ ಊರು ಜಾನಪದದ ತೌರೂರೆನಿಸಿದೆ.

ಜೀ.ಶಂ.ಪ ಮೈಸೂರು ವಿಶ್ವವಿದ್ಯಾಲಯದಲ್ಲಿ ಜಾನಪದ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ನಿರ್ವಹಿಸಿದರು. ಆ ಸಂದರ್ಭದಲ್ಲಿ ಮೈಸೂರಿನಲ್ಲಿ ಜಾನೊದ ವಸ್ತು ಸಂಗ್ರಹಾಲಯವನ್ನು ಪ್ರಾರಂಬಿಸಿದರು. ಅಲ್ಲಿ ಅನೇಕ ಜಾನಪದವಸ್ತುಗಳನ್ನು ಸ್ರಂಗ್ರಹಿಸದರು. ಆ ವಸ್ತುಗಳಲ್ಲಿ ಕೆಲವು

ಆಕಾರ, ಬಣ್ಣ ಕಳೆದು ಕೊಂಡಿದ್ದವು. ಆದ್ದರಿಂದ ಅಲ್ಲಿನ ಕೆಲವು ವಸ್ತುಗಳಿಗೆ ಬಣ್ಣಹಚ್ಚಲು ಒಬ್ಬ ವ್ಯಕ್ತಿ ಬೇಕಾಗಿತ್ತು. ಆಗ ಜೀ.ಶಂ.ಪ ಊರಿನಲ್ಲಿದ್ದ ತಮ್ಮ ರಾಮೇಗೌಡರಿಗೆ ಈ ವಿಷಯ ತಿಳಿಸಿದರು. ರಾಮೇಗೌಡರಿಗೆ ಪರಿಚಯವಿದ್ದ ಪುಟ್ಟಸ್ವಾಮಾಚಾರ್ಯರು ಈ ವಿಷಯ ತಿಳಿದು ಕುಟುಂಭ ಸಮೇತರಾಗಿ ಮೈಸೂರಿನಲ್ಲಿ ನೆಲೆಸಿದರು. ಆದರೆ ಅಲ್ಲಿ ಇವರ ಇತರ ವೃತ್ತಿಗಳು ನಿರ್ಜೀವವಾದವು. ಕೆಲವು ದಿನಗಳ ನಂತರ ಮೈಸೂರಿನಿಂದ ಹಿಂತಿರುಗಿ ತಮ್ಮ ಸೂತ್ರದ ಗೊಂಬೆ ಪ್ರದರ್ಶನವನ್ನು ಮುಂದುವರಿಸಿದರು. ಇವರ ಪ್ರತಿಭೆಯನ್ನು ಗುರುತಿಸಿದ ಜೀ.ಶಂ.ಪ ಬೆಂಗಳೂರು, ಮೈಸೂರುಗಳಲ್ಲಿ ಕೆಲವು ಪ್ರದರ್ಶನಗಳನ್ನು ಏರ್ಪಡಿಸಿದರು. ಈ ಪ್ರದರ್ಶನ ಜನರ ಹಾಗೂ ಸರ್ಕಾರದ ಮೆಚ್ಚುಗೆಗಳಿಸಿದವು. ನಂತರದ ದಿನಗಳು ಪುಟ್ಟಸ್ವಾಮಾಚಾರ್ಯರನ್ನು ಉತ್ತುಂಗಕ್ಕೆ ಏರಿಸಿದವು.

ಬೆಂಗಳೂರು, ಮೈಸೂರು, ಧರ್ಮಸ್ಥಳ.ಉಡುಪಿ, ಬಾಂಬೆ, ಕಲ್ಕತ್ತ, ಲಕ್ನೊ, ಚಂಡೀಗಡ, ಉದಯಪುರ, ಅರುಣಾಚಲ ಪ್ರದೇಶ, ಗೌಹಾತಿ, ಫ್ರಾನ್ಸ್ ನ ಅವಿನಿಯೋನಗರ, ಹಾಗೂ ದೂರದರ್ಶನ, ಆಕಾಶವಾಣಿಗಳಲ್ಲಿ ಇವರ ಪ್ರದರ್ಶನಗಳು ಪ್ರಸಾರಗೊಂಡವು.

ರಾಜೀವಗಾಂಧಿಯವರು ಪ್ರಧಾನಿಯಾಗಿದ್ದ ಕಾಲದಲ್ಲಿ ಭಾರತದ ಸಂಸ್ಕೃತಿಕ ಸಂಸ್ಕೃತಿಯನ್ನು ಉಳಿಸಬೇಕು; ಬೆಳೆಸಬೇಕೆಂಬ ದೃಷ್ಠಿಯಿಂದ ಅಪ್ನ ಉತ್ಸವ (ನಮ್ಮ ಉತ್ಸವ) ಕಾರ್ಯಕ್ರಮವನ್ನು ದೆಹಲಿಯಲ್ಲಿ ಏರ್ಪಡಿಸಿದರು. ಇದು ಒಂದು ತಿಂಗಳ ಪರ್ಯಂತ ನಡೆಯಿತು. ಇದರಲ್ಲಿ ಬೆಳ್ಳೂರಿನ ಶ್ರೀ ಭುವನೇಶ್ವರಿ ಸೂತ್ರದ ಗೊಂಬೆ ಮೇಳದವರಿಂದ ರಾಮಾಯಣದ ಪಂಚವಟಿ ಭಾಗ ಪ್ರದರ್ಶನಗೊಂಡಿತು. ಇದು ಮೆಚ್ಚುಗೆ ಪಡೆದು ಪುಟ್ಟಸ್ವಾಮಾಚಾರ್ಯರು ಹಾಗೂ ಹಿಮ್ಮೇಳ ಕಲಾವಿದರು ರಾಜೀವಗಾಂಧಿಯಿಂದ ಪ್ರಶಸ್ತಿ ಪಡೆದರು.

ಇದೇ ರೀತಿಯ ಉತ್ಸವವನ್ನು ಮಹಾರಾಷ್ಟ್ರದ ಮುಖ್ಯಮಂತ್ರಿಯಾಗಿದ್ದ ಶರದ್ ಪವಾರ್ ಕೂಡ ಏರ್ಪಡಿಸಿದ್ದರು. ಅದರಲ್ಲಿಯೂ ಈ ಕಲಾ ತಂಡ ಭಾಗವಹಿಸಿ ಪ್ರಶಸ್ತಿಗೆ ಭಾಜನರಾದರು.

೧೯೯೧ ರಲ್ಲಿ ಫ್ರಾನ್ಸಿನ ಅವಿನಿಯೇ ನಗರವೂ ಸಹ ಇವರನ್ನು ಕೈ ಬೀಸಿ ಕರೆಯಿತು. ಅಲ್ಲಿ ವಿವದ ದೇಶಗಳಿಂದ ಬಂದ ವಿವದ ಕಲಾವಿದರ ಪ್ರತಿ ಸ್ಪರ್ಧೆಯ ನಡುವೆ ಪೈಪೋಟಿ ನೀಡಿದರು. ಈ ತಂಡ ತಿಪ್ಪೆಸ್ವಾಮಿಯವರ ನಾಯಕತ್ವದಲ್ಲಿ ಸುಮಾರು ೧೭ ದಿನಗಳ ಕಾಲ ಫ್ರಾನ್ಸ್ ಮತ್ತು ಪಶ್ಚಿಮ ಜರ್ಮನಿಗೆ ಹೊರಟರು. ಈ ತಂಡದಲ್ಲಿ ಪುಟ್ಟಸ್ವಾಮಾಚಾರ್ಯರು, ಮಕ್ಕಳಾದ ಲೋಕೇಶಾಚಾರಿ, ಶ್ರೀನಿವಾಸಾಚಾರಿ, ಅಂಬಲ ಜೀರಹಳ್ಳಿ ಕಲಾವಿದರಾದ ವಿ.ಎಸ್.

ರಾಮೇಗೌಡ, ಜಯದೇವ, ಶಂಕರ ಕುಮಾರ, ಧನಂಜಯ್ಯ, ಕೃಷ್ಣೇಗೌಡ, ಬೋರೇಗೌಡ, ಕರೀಜೀರಹಳ್ಳಿ ರಂಗಪ್ಪ, ಶ್ರೀನಿವಾಸ, ಮುಖ ವೇಣಿ ಪಾಪಣ್ಣ, ಮುಂತಾದ ಕಲಾವಿದರ ತಂಡ ಬಾಗವಹಿಸಿತ್ತು.

ಇವರ ಸೇವೆ ಇಷ್ಟಕ್ಕೆ ನಿಲ್ಲದೆ ಬೆಳ್ಳೂರಿನಲ್ಲಿ ಕಾಳಿಕಾಂಬ ದೇವಾಲಯ ನಿರ್ಮಿಸಿ ಅದರ ಅರ್ಚಕರಾಗಿಯೂ ಸೇವೆಸಲ್ಲಿಸಿದರು. ಸುತ್ತಮುತ್ತಲ ಕೆಲವು ಹಳ್ಳಿಗಳಲ್ಲಿ ಕರಿಭಂಟನಕಾಳಗ ಎಂಬ ಯಕ್ಷಗಾನ ನಾಟಕವನ್ನು ಕಲಿಸಿದ್ದರು. ಈ ನಾಟಕ ಕೇರಳದ ತ್ರಿಚೂರಿನಲ್ಲಿಯೂ ಪ್ರದರ್ಶನ ಕಂಡಿತು.

ಜೀ.ಶಂ.ಪ ರವರು ರಾಜ್ಯ ಜಾನಪದ ಅಕಾಡೆಮಿ ಅಧ್ಯಕ್ಷರಾಗಿದ್ದಾಗ ಪುಟ್ಟಸ್ವಾಮಾಚಾರ್ಯರು ಸದಸ್ಯರಾಗಿ ನೇಮಕಗೊಂಡರು. ಇವರ ಪ್ರದರ್ಶನವನ್ನು ಮೆಚ್ಚಿದ ಎಚ್.ಎಲ್. ನಾಗೇಗೌಡರು ಇವರು ತಯಾರಿಸಿದ ಕೆಲವು ಸೂರ್ತದ ಗೊಂಬೆಗಳನ್ನು ರಾಮನಗರದ ಜಾನಪದ ವಸ್ತು ಸ್ರಂಗ್ರಹಾಲಯದಲ್ಲಿ ಪ್ರದರ್ಶನಕ್ಕೆ ಇಡಲಾಗಿದೆ.

ಸೂತ್ರದ ಗೊಂಬೆಯಾಟದಲ್ಲಿ ಮನುಷ್ಯರೆ ಪಾತ್ರಧಾರಿಗಳು. ಈ ಆಟವು ಪ್ರಚಾಈನ ಕಾಲದಿಂದಲೂ ಉಳಿದು ಬೆಳೆದು ಕೊಂಡು ಬಂದಿದೆ. ಗೊಂಬೆಗಳ ಸೂತ್ರ ಹಿಡಿದು ಆಡಿಸುವವನೇ ಸೂತ್ರಧಾರ. ಗೊಂಬೆಗಳು ಮನುಷ್ಯರಂತೆಯೇ ನರ್ತಿಸುತ್ತವೆ, ಪ್ರೇಮಿಸುತ್ತವೆ, ದ್ವೇಷಿಸುತ್ತವೆ, ಹೋರಾಡುತ್ತವೆ. ಮನುಷ್ಯನ ಬದುಕಿನ ರಾಗರಂಗುಗಳನ್ನೆಲ್ಲ ಗೊಂಬೆಗಳು ಅಭಿನಯಿಸಿ ತೋರಿಸುತ್ತವೆ. ಗೊಂಬೆಗಳನ್ನು ಕುಣಿಸುವಾಗ ಮನುಷ್ಯರು ಕಾಣದಂತೆ ಮುಖ ಮಂಟಪವನ್ನು ಬಿಟ್ಟು ಸುತ್ತಲೂ ಪರದೆ ಕಟ್ಟುತ್ತಾರೆ. ಮುಂಭಾಗದಲ್ಲಿ ಕೆಳಗೊಂದು ಬಿಳಿ ಪಂಚೆ ಹಾಗೂ ಮೂರು ನಾಲ್ಕು ಅಡಿ ಹಿಂಬಾಗಕ್ಕೆ ಮೇಲೊಂದು ಬಿಳಿಪಂಚೆ ಕಟ್ಟಿರುತ್ತಾರೆ. ಆ ಪಂಚೆಗಳ ಮರೆಯಲ್ಲಿ ನಿಂತು ಸಲಾಖೆಗಳಿಗೆ ಬಿಗಿದ ಗೊಂಬೆಗಳನ್ನು ಕುಣಿಸುತ್ತಾರೆ.

ಹಗುರವಾದ ಹಾಲಿವಣದ(ಪಾಲಿವಾಣ) ಮರದಿಂದ ಗೊಂಬೆಗಳನ್ನು ತಯಾರಿಸುತ್ತಾರೆ. ಗೊಂಬೆಗಳು ಸಾಮಾನ್ಯವಾಗಿ ಎರಡುರಿಂದ ನಾಲ್ಕು ಅಡಿ ಎತ್ತರವಿರುತ್ತದೆ. ಪಾತ್ರಗಳಿಗೆ ತಕ್ಕಂತೆ ಗೊಂಬೆಗಳಿಗೆ ತೊಡಿಸುವ ಆಭರಣಗಳನ್ನು ಕಲಾತ್ಮಕವಾಗಿ ಕುಸುರಿ ಕೆಲಸ ಮಾಡಿ ಸಿದ್ಧ ಪಡಿಸುತ್ತಾರೆ. ಗೊಂಬೆಗಳ ಮುಖ ಭಾವಕ್ಕೆ ತಕ್ಕಂತೆ ಬಣ್ಣಗಳನ್ನು ಬಳಸಿ ತಿದ್ದುತ್ತಾರೆ. ಗೊಂಬೆಗಳ ಕೈ ಕಾಲು ರುಂಡಗಳಿಗೆ ಕೀಲುಗಳನ್ನು ಜೋಡಿಸಿ ಕೈಗಳು, ಕಾಲುಗಳು ಮತ್ತು ಶಿರಭಾಗಕ್ಕೆ ಕಪ್ಪನೆಯ ದಾರಗಳನ್ನು ಅಳವಡಿಸುತ್ತಾರೆ. ಗೊಂಬೆಗಳನ್ನು ಕುಣಿಸುವಾಗ ಈ ದಾರಗಳನ್ನು

ಸೂತ್ರಧಾರನು ತನ್ನ ಕೈ ಬೆರಳುಗಳು, ಮಣಿಕಟ್ಟುಗಳಿಗೆ, ತಲೆಯ ಮೇಲ್ಭಾಗಕ್ಕೆ ವೃತ್ತಾಕಾರದ ಕಬ್ಬಿಣ ಕೈ ಕಟ್ಟಿಕೊಂಡು ಆಡಿಸುತ್ತಾನೆ. ಗೊಂಬೆಗಳು ಅಭಿನಯಿಸುವಾಗ ಮುಮ್ಮೇಳ ಹಾಡುವ ಭಾಗವತರಿರುತ್ತದೆ. ಜೊತೆಗೆ ಹಿಮ್ಮೇಳದವರಿರುತ್ತಾರೆ. ಮೃದಂಗ, ತಾಳ, ಮುಖವೀಣೆ, ಹಾರ್ಮೋನಿಯಂ ಮುಂತಾದವು ವಾದ್ಯಗಳು ಇವುಗಳ ಲಯಬದ್ಧ ಸುಮಧುರ ನಾದವು ಆಟಕ್ಕೆ ಹೆಚ್ಚಿನ ಸೋಗಸನ್ನು ತಂದುಕೊಡುತ್ತದೆ.

ತಿಮ್ಮಪ್ಪಚಾರ್ಯರು:-

ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕು ಜಾನಪದ ಕಲಾವಿದರ ತವರೂರು. ಜಾನಪದ ಎಂಬ ಹೆಸರು ಇಲ್ಲಿ ಉಳಿಯಬೇಕಾದರೆ ಶ್ರೀ.ಹೆಚ್.ಎಲ್.ನಾಗೇಗೌಡರು, ಶ್ರೀ ಜಿ.ಶಂ. ಪರಮಶಿವಯ್ಯ, ಕ.ರಾ.ಕೃಷ್ಣಮೂರ್ತಿ ಯವರು ಪ್ರಮುಖರು. ಇವರುಗಳು ನಾಗಮಂಗಲ ಹಾಗೂ ಬೆಳ್ಳೂರಿನ ಸುತ್ತ ಮುತ್ತ ಇದ್ದ ಜಾನಪದ ಕಲಾವಿದರವನ್ನು ದೇಶ ವಿದೇಶಗಳಲ್ಲಿ ಪರಿಚಯಿಸಿದರು. ಅವರಲ್ಲಿ ಬೆಳ್ಳೂರಿನ ಪುಟ್ಟಸ್ವಾನಾಚಾರ್ಯರ ಸೂತ್ರದ ಗೊಂಬೆ ಪ್ರದರ್ಶನವನ್ನು ಪ್ರದರ್ಶಿಸಲು ಅವಕಾಶ ಮಾಡಿಕೊಟ್ಟರು. ಇದೇ ಸೂತ್ರದ ಗೊಂಬೆ ಪ್ರದರ್ಶನವನ್ನು ಈಗ ನೆಲ್ಲಿಗೆರೆ ತಿಮ್ಮಪ್ಪಚಾರ್ಯರು ಮುಂದುವರಿಸುತ್ತಿದ್ದಾರೆ.

ತಿಮ್ಮಪ್ಪಚಾರ್ಯರು ಬೆಳ್ಳೂರಿನ ಪಕ್ಕದ ನೆಲ್ಲಿಗೆರೆ ಗ್ರಾಮದವರು. ಊರಿನಲ್ಲಿ ಕಮ್ಮಾರಿಕೆ ವೃತ್ತಿಯನ್ನು ಮುಂದುವರಿಸಿಕೊಂಡು ವಂಶಪಾರಂಪರ್ಯವಾಗಿ ಬಂದ ಕಲೆಯನ್ನು ಸಹಜವಾಗಿ ರೂಢಿಸಿಕೊಂಡು ಬಂದರು. ಈ ಕಲೆ ಅವರ ಕುಟುಂಬದಲ್ಲಿ ಮೂರ್ನಾಲ್ಕು ತಲೆಮಾರಿನಿಂದ ಬಂದದ್ದು. ಮೃದಂಗ ವಿದ್ವಾಂಸರಾಗಿದ್ದ ಇವರ ತಂದೆ ಮಾಯಾಚಾರ್ಯರಿಂದಲೇ ಈ ಕಲೆ ಹರಿದು ಬಂದಿದೆ. ಕೇವಲ ನಾಲ್ಕನೇ ತರಗತಿ ವರೆಗೆ ವಿದ್ಯಾಭ್ಯಾಸ ಮಾಡಿರುವ ಇವರು ಪುರಾಣ ಪುಣ್ಯ ಕಥೆಗಳು, ರಾಮಾಯಣ, ಮಾಹಾಭಾರತ ಕಥೆಗಳನ್ನು ಕರಗತ ಮಾಡಿಕೊಂಡಿದ್ದಾರೆ.

"ಶ್ರೀ ಕಾಳಿಕಾಂಬ ಪ್ರಸನ್ನ ಯುವಜನ ಯಕ್ಷಗಾನ ಮಂಡಲಿ" ಎಂಬ ಹೆಸರಿನ ಸಂಸ್ಥೆಯನ್ನು ಸ್ಥಾಪಿಸಿದ್ದಾರೆ. ಈ ಮಂಡಲಿಯ ಮೂಲಕ ಅನೇಕ ಪ್ರದರ್ಶನಗಳನ್ನು ನೀಡುತ್ತ ಅಕ್ಕ ಪಕ್ಕದ ಹಳ್ಳಿಗಳಲ್ಲಿ ಕರಿಭಂಟನ ಕಾಳಗ ಎಂಬ ಯಕ್ಷಗಾನ ಪ್ರಸಂಗವನ್ನು ನಿರ್ದೇಶನ ಮಾಡುತ್ತಾರೆ. ಇವರ ಇಡೀ ಕುಟುಂಬ ಸೂತ್ರದ ಬೊಂಬೆಯಾಟದಲ್ಲಿ ತೊಡಗಿ ಕೊಂಡಿದೆ. ಇವರೇ

ೊಂಬೆ ತಯಾರಿಕೆ, ಬಣ್ಣ ಹಚ್ಚುವುದು, ಚಿತ್ತಾಕರ್ಷಕ ಉಡುಪುಗಳನ್ನು ಸಿದ್ಧಪಡಿಸುವುದನ್ನು ವೃತ್ತಿಯನ್ನಾಗಿಸಿ ಕೊಂಡಿದ್ದಾರೆ.

ಆಕಾಶವಾಣಿ ಹಾಗೂ ದೂರದರ್ಶನದಲ್ಲಿ ಇವರ ಕಾರ್ಯ ಕ್ರಮಗಳು ಮೂಡಿ ಬರುತ್ತಿವೆ. ಮೈಸೂರಿನ ಮಾನಸ ಗಂಗೋತ್ರಿಯ ಜಾನಪದ ವಿಭಾಗದ ವಿದ್ಯಾರ್ಥಿಗಳಿಗೆ ಕರಿಭಂಟನ ಕಥೆಯ ಪ್ರಸಂಗದ ಅಭಿನಯದ ತರಬೇತಿ ನೀಡಿರುತ್ತಾರೆ. ಇಲ್ಲಿಯ ಜಾನಪದ ಕಲೆಯನ್ನು ಅಭ್ಯಾಸಿಸಲು ಬಂದಿದ್ದ ಅಮೇರಿಕಾ ದೇಶದ ವಿದ್ಯಾರ್ಥಿಗಳಿಗೂ ತರಬೇತಿ ನೀಡಿದ್ದಾರೆ.

ತಿಮ್ಮಪ್ಪಚಾರ್ಯರ ಕಲೆಯನ್ನು ಗುರುತಿಸಿದ ಸರ್ಕಾರ ೧೯೮೧ ರಲ್ಲಿ ಕರ್ನಾಟಕ ರಾಜ್ಯ ನಾಟಕ ಅಕಾಡೆಮಿ ಪ್ರಶಸ್ತಿ ೧೯೯೮ ರಲ್ಲಿ ರಾಜೋತ್ಸವ ಪ್ರಶಸ್ತಿ, ಮೈಸೂರು ವಿಶ್ವವಿದ್ಯಾಲಯ ನೀಡಿರುವ ಕೆಲವು ಪ್ರಶಸ್ತಿಗಳು ಲಭಿಸಿವೆ. ಇಷ್ಟೆಲ್ಲ ಪ್ರಶಸ್ತಿಗಳು ಬಂದರೂ ತಮ್ಮ ಕಮ್ಮಾರಿಕೆಯ ವೃತ್ತಿಯನ್ನು ಇನ್ನೂ ಬಿಟ್ಟಿಲ್ಲ ರೈತರಿಗೆ ಬೇಕಾದ ವ್ಯವಸಾಯದ ಉಪಕರಣಗಳನ್ನು ತಯಾರಿಸುವಲ್ಲಿ ತೊಡಗಿರುತ್ತಾರೆ. ತಮ್ಮ ಸೂತ್ರದ ಗೊಂಬೆ ಪ್ರದರ್ಶನ ಇಲ್ಲಿಗೆ ನಿಲ್ಲಬಾರದೆಮದು ತಮ್ಮ ಮಕ್ಕಳಿಗೆ ಮೊಮ್ಮಕ್ಕಳಿಗೆ ಧಾರೆ ಎರೆದಿದ್ದಾರೆ.

೨. ತೊಗಲು ಗೊಂಬೆಯಾಟ:-

ಒಂದು ಕಾಲಕ್ಕೆ ಸೂತ್ರದ ಗೊಂಬೆಯಾಟ ಸಮಾಜದ ಮೇಲುವರ್ಗದವರ ಮನರಂಜನೆಯಾಗಿದ್ದಂತೆ ತೊಗಲು ಗೊಬೆಯಾಟ ಸಮಾಜದ ಕೆಳವರ್ಗದವರ ಮನರಂಜನೆಯಾಗಿತ್ತು. ಈ ಗೊಂಬೆಗಳು ಚಪ್ಪಟ್ಟೆಯಾಗಿದ್ದು ತೊಗರಿನಿಂದ ಮಾಡಿದವುಗಳಾಗಿರುತ್ತವೆ. ತೊಗಲನ್ನು ಸರಿಯಾದ ಆಕಾರಕ್ಕೆ ಕತ್ತರಿಸಿ ಅದರ ಮೇಲೆ ಬಣ್ಣದಿಂದ ಅಂಗಾಂಗಳನ್ನು ಬಿಡಿಸುತ್ತಾರೆ. ಕೈಕಾಲುಗಳು ಚಲಿಸುವಂತಿರುತ್ತವೆ.

ಸಿಳ್ಳೆಕ್ಯಾತ ಎಂಬ ಜನಾಂಗದವರು ತೊಗಲು ಗೊಂಬೆ ಯಾಟದ ವೃತ್ತಿನಿರತರು. ಇವರನ್ನು ಗೊಂಬೆರಾಮರು, ಚಿತ್ರ ಮರಾಠರು ಎಂದೂ ಕರೆಯುತ್ತಾರೆ. ಪ್ರದರ್ಶನ ನಡೆಯ ಬೇಕಾದರೆ ಒಂದು ಅಥವಾ ಎರಡು ಕುಟುಂಬದವರೆಲ್ಲ ಭಾಗವಹಿಸುತ್ತಾರೆ. ನಾಲ್ಕು ಅಥವಾ ಐದು ಚದರಡಿಜಾಗದಲ್ಲಿ ವೇದಿಕೆ ನಿರ್ಮಿಸಿ ಮುಂಭಾಗಕ್ಕೆ ಪರದೆ ಕಟ್ಟುತ್ತಾರೆ. ಒಳಭಾಗದಲ್ಲಿ ಪ್ರಕಾಶಮಾನವಾಗಿ ಉರಿಯುವ ಪಂಜನ್ನು ಬಳಸುತ್ತಾರೆ. ಆದರೆ ಇತ್ತೀಚೆಗೆ ಪೆಟ್ರೋಲ್ ಮ್ಯಾಕ್ಸ್, ಗ್ಯಾಸ್ ಲೈಟ್, ವಿದ್ಯುತ್ ಬಲ್ಬಗಳನ್ನು ಬಳಸುತ್ತಾರೆ. ಮುಮ್ಮೇಳ ಮತ್ತು ಹಿಮ್ಮೇಳದೊಂದಿಗೆ

ಪ್ರದರ್ಶನ ನಡೆಯುತ್ತದೆ. ಸಾಮಾನ್ಯವಾಗಿ ಮಹಾಭಾರತ ಮತ್ತು ರಾಮಾಯಣದ ಘಟನೆಗಳು ಈ ಆಟಗಳ ವಸ್ತು.

ಈ ಗೊಂಬೆಯಾಟದ ಪ್ರದರ್ಶಕರು ವರ್ಷದಲ್ಲಿ ಒಂದು ಊರಿನಲ್ಲಿ ಒಂದು ಅಥವಾ ಎರಡು ತಿಂಗಳು ಬಿಡಾರ ಹೂಡುತ್ತಿದ್ದರು. ಬಿಡಾರ ಹೂಡುವ ಗುಂಪು ತಮ್ಮ ಸುತ್ತಮುತ್ತಲ ಹಳ್ಳಿಗಳನ್ನು ದತ್ತು ಪಡೆಯುವ ಮೂಲಕ ಹಂಚಿಕೊಳ್ಳುತ್ತಿದ್ದರು. ಇದರಲ್ಲಿ ಪ್ರಮುಖರೆಂದರೆ ಬೆಳ್ಳೂರಿನ ಪಕ್ಕದಲ್ಲಿರುವ ದೊಡ್ಡಾಘಟ್ಟ ಗ್ರಾಮದ ಹೊಂಬಯ್ಯ, ಮೆಲ್ಲಹಳ್ಳಿ ಗ್ರಾಮದ ಪಾಪಣ್ಣ ಪ್ರಮುಖರಾದವರು. ಹೊಂಬಯ್ಯ ದೇಶ ವಿದೇಶಗಳಲ್ಲಿ ಪ್ರದರ್ಶನ ನೀಡಿದ್ದಾರೆ. ಹಿಂದೆ ಗ್ರಾಮೀಣ ಜನರಿಗೆ ಇದೇ ಮನೋರಂಜನ ಕಾರ್ಯಕ್ರಮವಾಗಿತ್ತು. ಆದರೆ ಇಂದಿನ ಆಧುನಿಕ ಭರಾಟೆಯಲ್ಲಿ ಸಿನಿಮ, ದೂರದರ್ಶನ, ಮೊಬೈಲ್ ಗಳ ಮುಂದೆ ತೊಗಲು ಗೊಂಬೆಯಾಟ ಮಂದವಾಗಿದೆ.

ಬೆಳ್ಳೂರಿನ ಸುತ್ತಮುತ್ತ ಗೊಂಬೆ ರಾಮ ಜನಾಂಗದವರು ಇದ್ದರೂ ಅವರ ಜೀವನ ಕಠಿಣವಾಗಿದೆ. ಇತ್ತೀಚೆಗೆ ಅವರು ಬೇರೆ ಬೇರೆ ವೃತ್ತಿಗಳನ್ನು ಅವಲಂಬಿಸುವಂತಾಗಿದೆ.

೩. ಹೆಳವರು:-

ಗ್ರಾಮೀಣ ಪ್ರದೇಶಗಳಲ್ಲಿ 'ಹೆಳವರಮಲ್ಲರು' ಎಂದೇ ಹೆಸರಾಗಿರುವ ಹೆಳವರು ಕರ್ನಾಟಕದ ಲೌಕಿಕ ವೃತ್ತಿಗಾಯಕ ಪರಂಪರೆಗೆ ಸೇರಿದವರು. ಚಾಪೆ ಹೆಳವರು, ಗಂಟೆ ಹೆಳವರು ಎಂದು ಎರಡು ಬಗೆಗಳಿವೆ. ಚಾಪೆ ಹೆಳವರ ವೃತ್ತಿ ಚಾಪೆ ಹೆಣೆಯುವುದಾಗಿದ್ದರೆ, ಗಂಟೆ ಹೆಳವರು ರೈತಾಪಿ ಜನಗಳಾಗಿದ್ದಾರೆ. ಗಂಟೆ ಹೆಳವರು ಕೆಲವು ಊರುಗಳನ್ನು ಹಂಚಿಕೊಂಡು ತಮ್ಮ ಒಕ್ಕಲು ಮನೆತನಗಳ ವಂಶಾವಳಿಯನ್ನು ಹಾಡಿ ಹೊಗಳಿಕೊಂಡು ಜೀವನ ಮಾಡುತ್ತಾರೆ. ಗಂಟೆ ಹೆಳವರು ಗಂಟೆಯ ಹಿಡಿಗೆ ನಾಲ್ಕು ಬೆರಳು ಅಗಲಕ್ಕೆ ಮಂದವಾಗಿ ಬಟ್ಟೆಯನ್ನು ಜೋಡಿಸಿ ಅರ್ಧ ಅಡಿ ಉದ್ದಕ್ಕೆ ಅದನ್ನು ಹೊಲಿದು ಕವಡೆಗಳನ್ನು ಪೋಣಿಸಿರುತ್ತಾರೆ. ಗಂಟೆ ಬಾರಿಸುವಾಗ ಎಡಗೈಯಲ್ಲಿ ಬುಟ್ಟಿಯನ್ನು ಹಿಡಿದು ಬಲಗೈಯಲ್ಲಿ ಗಂಟೆಯ ನಾಲಿಗೆಯನ್ನು ತಾಳಕ್ಕನುಗುಣವಾಗಿ ಬಾರಿಸುತ್ತಾ ಹಾಡುಗಳನ್ನು ಹಾಡುತ್ತಾರೆ. ಇವರು ಗಂಟೆಯನ್ನು ಬಿಟ್ಟು ಮತ್ತಾವ ವಾದ್ಯಗಳನ್ನು ಬಳಸುವುದಿಲ್ಲ. ಇವರು ಚಾಮುಂಡಿ ಪುರಾಣ, ಮಾಗಡಿ ಕೆಂಪೇಗೌಡ, ಚುಂಚನಗಿರಿ ಭೈರವ, ಮಹದೇಶ್ವರ, ಎಡೆಯೂರು ಸಿದ್ಧಲಿಂಗೇಶ್ವರ ಮೊದಲಾದ ಕಥನ ಕಾವ್ಯಗಳನ್ನು ಹಾಡುತ್ತಾರೆ.

ಹೆಳವರು ಅಲೆಮಾರಿಗಳಲ್ಲ. ನಿರ್ಧಿಷ್ಟ ಕಡಗಳಲ್ಲಿ ವಾಸಿಸುತ್ತಿದ್ದು ಗೊತ್ತಾದ ಊರುಗಳಲ್ಲಿ ಮಾತ್ರ ಸಂಚರಿಸುತ್ತಾರೆ. ಜೋಳಿಗೆ ಕೋಲು ಗಂಟೆಗಳೊಂದಿಗೆ ಹಾಡಿ ಹೊಗಳುತ್ತಾರೆ. ಜನರು ಕೊಡುವ ಕಾಳು ಕಡ್ಡಿಗಳನ್ನು ಪಡೆಯುತ್ತಾರೆ.

ಬೆಳ್ಳೂರಿನ ಪಕ್ಕದಲ್ಲಿರುವ ಕಂಚನ ಹಳ್ಳಿಯಲ್ಲಿ ಹೆಳವರ ಮನೆತನಗಳಿವೆ. ಇವರು ಈಗಲೂ ಸೋಮವಾರ ಸಂತೆಯ ದಿನ ಮನೆ ಅಂಗಡಿಗಳ ಮುಂದೆ ತಮ್ಮ ಗಂಟೆಯ ನಾದಕ್ಕೆ ತಕ್ಕಂತೆ ಹಾಡಿನ ಮೂಲಕ ಆಕರ್ಷಣೀಯ ವ್ಯಕ್ತಿಗಳಾಗಿದ್ದಾರೆ. ಇವರು ಮೂಲವ್ಯಾದಿಗೆ ಚಿಕಿತ್ಸೆ ಮಾಡುವುದುಂಟು. ಸಂಖ್ಯೆಯಲ್ಲಿ ಕಡಿಮೆ ಇದ್ದರೂ ವಿಶಿಷ್ಟ ಸಂಪ್ರದಾಯದ ದೃಷ್ಟಿಯಿಂದ ಮಹತ್ವ ಪಡೆದಿರುವ ಹೆಳವರು ಮತ್ತು ಅವರ ಕಾವ್ಯಗಳನ್ನು ಎಚ್.ಎಲ್. ನಾಗೇಗೌಡರು ಸಂಗ್ರಹಿಸಿ ಪ್ರಕಟಿಸಿದ್ದಾರೆ.

## ೪. ಆಧುನಿಕ ರಂಗಭೂಮಿ:-

ರಂಗಭೂಮಿ ಗ್ರಾಮೀಣ ಜನತೆಯ ಒಂದು ಆಕರ್ಷಕ ಕಲೆಯಾಗಿದೆ. ಹೊಲ ಗದ್ದೆಗಳ ಕೊಯ್ಲು ಮುಗಿದು ಧಾನ್ಯ ಒಕ್ಕಣೆಯಾದ ಮೇಲೆ ಜನ ವಿಶ್ರಾಂತಿ ಜೀವನ ಬಯಸುತ್ತಾರೆ. ಅಂಥಹ ವೇಳೆಯಲ್ಲಿ ಗ್ರಾಮೀಣ ಹಬ್ಬಗಳು ಪ್ರಾರಂಭವಾಗುತ್ತವೆ. ಆ ಗ್ರಾಮೀನ ಹಬ್ಬಗಳಲ್ಲಿ ಕೆಲವು ಪೌರಾಣಿಕ ನಾಟಕಗಳನ್ನು ಆಡಲು ಮುಂದಾಗುತ್ತಾರೆ. ಜೀವನದಲ್ಲಿ ಒಮ್ಮೆಯಾದರೂ ಬಣ್ಣಹಾಕಿ ರಂಗದ ಮೇಲೆ ಕುಣಿಯಬೇಕೆಂಬ ಬಯಕೆ ಗ್ರಾಮೀಣ ಜನರಲ್ಲಿರುತ್ತದೆ.

ಬೆಳ್ಳೂರಿನ ಸುತ್ತಮುತ್ತಲಲ್ಲಿ ಹೆಸರುವಾಸಿಯಾದ ನಾಟಕ ಕಲಿಸುವ ಮೇಷ್ಟ್ರು ಹುಡುಕಿ ಕರೆತಂದು ಅಭ್ಯಾಸ ಮಾಡುತ್ತಾರೆ. ಬೆಳ್ಳೂರು ಆರ್ಥಿಕವಾಗಿ ಶೈಕ್ಷಣಿಕವಾಗಿ ಮುಂದುವರಿದಿದ್ದರು ರಂಗ ಭೂಮಿಗೆ ಸಾಕಷ್ಟು ಪ್ರೋತ್ಸಾಹ ನೀಡುತ್ತಾರೆ. ಈ ಊರಿನ ಕೆಲವು ಜನರನ್ನು ಸೇರಿಸಿಕೊಂಡು ಸುತ್ತಮುತ್ತಲ ಹಳ್ಳಿಯ ಜನ ಸೇರಿ ವರ್ಷದಲ್ಲಿ ಐದಾರು ನಾಟಕ ಪ್ರದರ್ಶನಗಳು ನಡೆಯುತ್ತವೆ. ಚನ್ನಯ್ಯನಕೊಪ್ಪಲು ರಾಜಣ್ಣನವರ ಮುಂದಾಳತ್ವದಲ್ಲಿ ಆಧುನಿಕ ರಂಗಭುಮಿ ನೆಲಕಂಡಿದೆ. ಹೆಚ್ಚಾಗಿ ಮಹಾಭಾರತ ಮತ್ತು ರಾಮಾಯಣದಲ್ಲಿ ಬರುವ ಕೆಲವು ಪ್ರಸಂಗಗಳನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಹೆಚ್ಚಾಗಿ ಕುರುಕ್ಷೇತ್ರದ ಪ್ರಸಂಗ, ವಿರಾಟ ಪರ್ವ, ರಾಮಾಯಣದಲ್ಲಿ ಸೀತಾ ಪಹರಣ ಪ್ರಸಂಗಗಳನ್ನು ಆಯ್ಕೆ ಮಾಡಿ ಕೊಳ್ಳುತ್ತಾರೆ.

ಭೀಷ್ಮನ ಅಥವಾ ಧರ್ಮರಾಯನ ಪಾತ್ರದಲ್ಲಿ ಚನ್ನಯ್ಯನ ಕೊಪ್ಪಲ ರಾಜಣ್ಣ, ಅರ್ಜುನನ ಪಾತ್ರದಲ್ಲಿ ಶ್ರೀರಂಗ ಪುರದ ಶಂಕರ, ಕೃಷ್ಣನ ಪಾತ್ರದಲ್ಲಿ ಪಾಳ್ಯದ ಲಕ್ಷ್ಮಣ, ಭೀಮನ ಪಾತ್ರದಲ್ಲಿ ಜೀರಹಳ್ಳಿ ಕಂಸ

ಆಧುನಿಕ ರಂಗಭೂಮಿಗೆ ಮತ್ತೊಂದು ಕೊಡುಗೆ ಎಂದರೆ ಆದಿಚುಂಚನಗಿರಿ ಕ್ಷೇತ್ರದ "ಜಗದ್ಗುರು ಭಾಲಗಂಗಾಧರ ನಾಟಕ ಸಂಘ" ಜಭಾನ ಎಂದೇ ಪ್ರಸಿದ್ಧವಾಗಿರುವ ಈ ಸಂಘ ಇಂದು ಬೃಹದಾಕಾರವಾಗಿ ಬೆಳೆದು ನಿಂತಿದೆ. ಇದಕ್ಕೆ ಪ್ರೋತ್ಸಾಹಕರಾಗಿ ಕ್ಷೇತ್ರದ ಶ್ರೀ. ಶ್ರೀ.ಶ್ರೀ ಭಾಲಗಂಗಾಧರನಾಥ ಮಹಾಸ್ವಾಮಿಗಳ ಸೇವೆ ಅಪಾರ ಪ್ರತಿವರ್ಷ ರಾಜ್ಯದ ನಾನಾ ಮೂಲೆಗಳಿಂದ ನಾಟಕ ತಂಡಗಳನ್ನು ಕರೆಸಿ ಇಲ್ಲಿ ಪ್ರದರ್ಶನ ಏರ್ಪಡಿಸುತ್ತಾರೆ. ಉತ್ತಮ ನಾಟಕಗಳನ್ನು ಪ್ರದರ್ಶಿಸಿದವರಿಗೆ ಪ್ರಶಸ್ತಿ ಪತ್ರ ಹಾಗೂ ಬಹುಮಾನಗಳನ್ನು ನೀಡುವ ವಾಡಿಕೆ ಮುಂದುವರಿದಿದೆ. ಇದು ಬೆಳ್ಳುರಿನ ಹಾಗೂ ಸುತ್ತ ಮುತ್ತಲ ಗ್ರಾಮಗಳ ಮೇಲೆ ಸಾಕಷ್ಟು ಪ್ರಭಾವ ಬೀರುತ್ತದೆ. ಇದರಿಂದ ಉತ್ತೇಜನಗೊಂಡ ಕಲಾವಿದರು ಗ್ರಾಮಗಳಲ್ಲಿ ನಾಟಕ ಅಭಿನಯಿಸ ತೊಡಗುತ್ತಾರೆ.

## ರಂಗ ಕಲೆಗಳು

### ೧. ಸೋಮನ ಕುಣಿತ:-

ಈ ಉತ್ಸವದಲ್ಲಿ ಸೋಮನ ಕುಣಿತ ಹೆಸರುವಾಸಿಯಾಗಿರುತ್ತದೆ. ಈ ಕುಣಿತವು ಶಕ್ತಿ ಸಂಪ್ರದಾಯಕ್ಕೆ ಸೇರಿದ ಬಹು ರಂಜನೀಯವಾದ ಮುಖವಾಡದ ಕುಣಿತ. ಸಾಮಾನ್ಯವಾಗಿ ಸೋಮನ ಮುಖವಾಡಗಳನ್ನು ದೇವ ಬೂತಾಳೆ ಅಥವಾ ರಕ್ತ ಬೂತಾಳೆ ಮರದಿಂದ ತಯಾರಿಸುತ್ತಾರೆ. ಹೀಗೆ ತಯಾರಿಸುವಾಗ ನಿರ್ದಿಷ್ಟಧಾಲ್ಮಿಕ ವಿಧಿ ವಿಧಾನಗಳನ್ನು ಅನುಸರಿಸುತ್ತಾರೆ.

ಅಗಲವಾದ ಹಣೆ, ವಿಶಾಲವಾದ ಕಿವಿ ಕಣ್ಣುಗಳು, ದೊಡ್ಡದಾದ ಮೂಗು ಇರುವಂತೆ ಮುಖವಾಡವನ್ನು ಕೆತ್ತಿ ನಯಗೊಳಿಸುತ್ತಾರೆ. ಮನುಷ್ಯನ ತಲೆಬುರಡೆಗಿಂತ ಸಾಕಷ್ಟು ದೊಡ್ಡದಿರುವ ಮುಖವಾಡದ ಹಿಂಭಾಗಕ್ಕೆ ಬಿದಿರಿನ ಬೆತ್ತವನ್ನು ಕಮಾನಿನ ಆಕೃತಿಯಲ್ಲಿ ಬಗ್ಗಿಸಿ ಕಟ್ಟಿರುತ್ತಾರೆ. ಪ್ರಭಾವಳಿಯಂತೆ ಕಾಣಲು ಬಣ್ಣ ಬಣ್ಣದ ಬಟ್ಟೆಗಳಿಂದ ಅಲಂಕರಿಸುತ್ತಾರೆ. ಗ್ರಾಮ

ದೇವತೆಗೆ ಹರಕೆಯಾಗಿ ಬಂದ ವಿವಿಧ ಬಣ್ಣಗಳ ಸೀರೆಗಳನ್ನು ಕಮಾನಿ ಆಕೃತಿಯ ಪ್ರಭಾವಳಿಯಂತಿರುವ ಬೆತ್ತದ ಕಡ್ಡಿಗೆ ಇಳಿ ಬಿಡುತ್ತಾರೆ. ಸೋಮನ ಮುಖವಾಡದೊಳಗೆ ತಲೆಯನ್ನು ತೂರಿಸಿ ಹೊತ್ತು ಕುಣಿಯುವ ಕಲಾವಿದನಿಗೆ ಹೊರಗಿನ ಪರಿಸರ ಕಾಣಲು ಅನುಕೂಲವಾಗುವಂತೆ ಮುಖವಾಡದ ಮೂಗಿನ ಹೊಳ್ಳೆಗಳಿಗೂ ಹೊತ್ತು ಕುಣಿಯುವ ಕಲಾವಿದನ ಕಣ್ಣಿಗೂ ನೇರ ಹೊಂದಿಕೆಯಾಗುವಂಥ ದೃಷ್ಟಿಗೋಚರ ವ್ಯವಸ್ಥೆಯನ್ನು ಕಲ್ಪಿಸಿರುತ್ತಾರೆ. ಮುಖವಾಡದ ರೂಪಗಳು ಭಯ – ಭಕ್ತಿಗಳ ಪ್ರತಿಕವಾಗಿರುವಂತೆ ಕೆಂಪು, ಹಳದಿ, ಕಪ್ಪು ಬಣ್ಣಗಳನ್ನು ಬಳಿಯುತ್ತಾರೆ.

ಸಾಮಾನ್ಯವಾಗಿ ಒಂದು ಊರಿನ ಗ್ರಾಮ ದೇವತೆಗೆ ಎರಡು ಸೋಮಗಳಿರುತ್ತವೆ. ಒಂದು ಹಳದಿ ಬಣ್ಣದ ಸೋಮನಾದರೆ ಮತ್ತೊಂದು ಕೆಂಪು ಬಣ್ಣದ ಸೋಮ. ಹಳದಿ ಬಣ್ಣದ ಸೋಮನನ್ನು ಭೂತರಾಯನೆಮದು ಕರೆಯುತ್ತಾರೆ. ಕೆಂಚರಾಯ ಸಾತ್ವಿಕ ಸೌಮ್ಯ ಸ್ವಭಾವದವನು. ಆದರೆ ಭೂತರಾಯ ರೌದ್ರಮೂರ್ತಿ ಹಣೆಗೆ ನಾಮ, ಕೋರೆಹಲ್ಲು, ಕೊಂಕು ಮೀಸೆ, ದಪ್ಪಕನ್ನು ಹಾಗೂ ಉಬ್ಬುಗಳಿದ್ದು ಮುಖದಲ್ಲಿ ಕೊಪ್ಪ ಎದ್ದು ಕಾಣುವಂತಿರುತ್ತದೆ.

ಸೋಮವನ್ನು ಹೊತ್ತು ಕುಣಿಯುವವರು ಸೊಂಟಕ್ಕೆ ಹರಕೆಯ ಸೀರೆಯುಟ್ಟು ನೆತ್ತಿಗೂ ಹರಕೆಯ ಸೀರೆಯ ಸಿಂಬಿಸುತ್ತಿ ಕೊಳ್ಳುತ್ತಾರೆ. ಕೊರಳಿಗೆ ದೇವರ ತಾಳಿ ಧರಿಸುತ್ತಾರೆ. ಸೋಮವನ್ನು ಹೊತ್ತವನು ಕಾಲಿಗೆ ಗೆಜ್ಜೆ, ಕೈಗಳಿಗೆ ಬೆಳ್ಳಿ ಕಡಗ, ಒಂದು ಕೈಯಲ್ಲಿ ನೀಳವಾದ ಬೆತ್ತ ಅಥವಾ ಸೆಣಬಿನ ನಾರಿನಿಂದ ಎಣೆದ ಚೌಟಿ ಇರುತ್ತದೆ. ಹರೆ, ದೋಣು, ತಮಟೆ, ನಗಾರಿ ಮುಖ ವೀಣೆಗಳ ಗತ್ತು ಹಾಗೂ ಹೊಗಳಿಕೆ ಪದಗಳ ಹಿನ್ನೆಲೆಯಲ್ಲಿ ಹೆಜ್ಜೆಹಾಕುತ್ತಾ ಕುಣಿಯುತ್ತಾರೆ. ಈ ಕುಣಿತಗಳು ಹೆಚ್ಚಾಗಿ ಮಂಡ್ಯ, ತುಮಕೂರು, ಹಾಸನ, ಮೈಸೂರು, ಬೆಂಗಳೂರು ಗ್ರಾಮಾಂತರ, ಚಿಕ್ಕಮಂಗಳೂರು ಜಿಲ್ಲೆಗಳಲ್ಲಿ ವಿಶೇಷವಾಗಿ ಕಂಡು ಬರುತ್ತವೆ.

ಬೆಳ್ಳೂರಿನಲ್ಲಿ ಗಂಡಿನ ತಿಮ್ಮಯ್ಯ, ಮೀಸೆರಾಜಣ್ಣ, ಕುಳ್ಳೇಗೌಡ, ಸಿದ್ದಪ್ಪ, ಮಂತನಹಳ್ಳಿ ನಿಂಗೇಗೌಡ ಇತ್ತೀಚೆಗೆ ಚಂದ್ರೇಗೌಡ ಮುಂತಾದವರು ತಾಳಕ್ಕೆ ತಕ್ಕಂತೆ ಕುಣಿಯುತ್ತಾರೆ.

೨. <u>ರಂಗದ ಕುಣಿತ:-</u>

ಈ ರೀತಿಯ ಕುಣಿತದ ಹಬ್ಬಗಳೆಲ್ಲ ಸುಗ್ಗಿಯ ನಂತರದ ಕಾಲದಲ್ಲಿ ಕಂಡು ಬರುತ್ತವೆ. ಗ್ರಾಮದೇವತೆಯ ಹಬ್ಬಕ್ಕೆ ಇನ್ನು ಹದಿನೈದು ದಿನಗಳಿರುವಂತೆಯೇ ಊರ ಹಿರಿಯರು ಕಿರಿಯರು ಸೇರಿ ರಂಗದ ಬೀದಿಯಲ್ಲಿ ಕುಣಿಯಲು ಪ್ರಾರಂಬಿಸುತ್ತಾರೆ. ಹಬ್ಬಕ್ಕೆ ಕಂಬ ತರುವ ಶಾಸ್ತ್ರ ಮುಗಿಸಿ ದಂದಿನಿಂದ ರಂಗ ಕುಣಿಯಲು ಪ್ರಾರಂಬಿಸುತ್ತಾರೆ. ಕುಣಿಯುವವರು ಬಿಳಿಯ ಅಂಗಿ, ಕಚ್ಚೆ, ತಲೆಗೆ ರುಮಾಲು ಬಿಗಿದು ಕಾಲಿಗೆ ಗೆಜ್ಜೆ ಕಟ್ಟಿ ಕೈಯಲ್ಲೊಂದು ಚೌಕ ಹಿಡಿದು ತಮಟೆ ನಗಾರಿಗಳ ಗತ್ತುಗಳಿಗೆ ಅನುಗುಣವಾಗಿ ಕುಣಿತ ನಡೆಸುತ್ತಾರೆ. ಕುಣಿಯುವವರು ಸಾಲಾಗಿ ವರ್ತುಲಾಕಾರವಾಗಿ ಬೆಂಕಿಯ ಬೆಳಕಿನಲ್ಲಿ ಕುಣಿಯುತ್ತಾರೆ. ಕೈಯಲ್ಲಿ ಚಾಕನ್ನು ಬೀಸುತ್ತಾ ಬಲದಿಂದ ಎಡಕ್ಕೆ ಎಡದಿಂದ ಬಲಕ್ಕೆ ತಿರುಗುತ್ತಾ ಕುಣಿಯುತ್ತಾರೆ. ತಮಟೆಯ ಶಬ್ದಕ್ಕೆ ತಕ್ಕಂತೆ ಮಾರಮ್ಮನಗತಿ, ತಿರಗಣಿಗತಿ, ನಂದಿಕಂಬದಗತಿ, ಕೂತಾಟದಗತಿ, ಬಾಬಯ್ಯನಗತಿ, ಒಳಗಡಿ, ಸೀಮೆಗತಿ, ಕತ್ತರಿಗಾಲಗತಿ ಹೀಗೆ ಹಲವು ಬಗೆಯ ಗತಿಗಳಲ್ಲಿ ರಂಗ ಕುಣಿಯುತ್ತಾರೆ.

೩. <u>ಕೀಲು ಕುದರೆ ಕುಣಿತ:-</u>

ಜನಪದ ಕಥೆಗಳಲ್ಲಿ ಕಂಡು ಬರುವ ಕೀಲು ಕುದುರೆಯನ್ನು ಬಿದಿರಿನದಬ್ಬೆ, ಮರದ ತಿರುಳು, ಕಾಗದದ ಗಂಜಿ, ಜೇಡಿ ಮಣ್ಣು ಬಳಸಿ ಸಿದ್ದ ಪಡಿಸುತ್ತಾರೆ. ಕಾಲುಗಳನ್ನು ಬಿಟ್ಟು ಉಳಿದಂತೆ ಕುದುರೆಯ ಆಕಾರಕ್ಕೆ ಬಿದಿರಿನ ತೆಳುವಾದ ದಬ್ಬೆಗಳನ್ನು ಹೆಣೆಯುತ್ತಾರೆ. ರುಂಡದ ಭಾಗವನ್ನು ಕಾಗದದ ತಿರುಳಿನಿಂದ ತಯಾರಿಸುತ್ತಾರೆ. ಕುದುರೆಯು ಕುಣಿಯುವಾಗ ಅದರ ನಾಲಗೆಯ ಮೇಲಕ್ಕೆ ಕೆಳಕ್ಕೆ ಆಡುವಂತೆ ಕೀಲನ್ನು ಅಳವಡಿಸುತ್ತಾರೆ. ಕುದುರೆಯ ಮುಂಡದ ಒಳ ಭಾಗವು ಟೊಳ್ಳಾಗಿರುತ್ತದೆ.

ಕೀಲು ಕುದುರೆ ಕುಣಿತದಲ್ಲಿ ಎರಡು ಕುದುರೆಗಳಿಸುತ್ತವೆ. ಕಲಾವಿದರು ರಾಜರಾಣಿಯರಂತೆ ಕಿರೀಟ, ಭುಜಕೀರ್ತಿ, ಎದೆಹಾರ, ವೀರಗಚ್ಚೆ ಮೊದಲಾದ ರಾಜನ ಉಡುಪುಗಳನ್ನು ಧರಿಸಿ ಮುಖಕ್ಕೆ ನಸುಗೆಂಪು ಬಣ್ಣ ಹಚ್ಚಿಕೊಂಡಿರುತ್ತಾರೆ. ಇದೇ ರೀತಿಯಲ್ಲಿ ರಾಣಿಯು ಕುದುರೆ ಮೇಲೆ ಕುಳಿತಿರುವಂತೆ ಉಡುಪುಗಳನ್ನು ದರಿಸಿರುತ್ತಾರೆ. ಇಲ್ಲಿ ಹೆಚ್ಚಾಗಿ ಗಂಡಸರೆ ರಾಣಿಯ ಉಡುಪು ದರಿಸಿರುತ್ತಾರೆ. ಕುದುರೆಯಗೊರಸುಗಳಂತೆ ಕಾಣುವ ಹಗುರವಾದ ಮರದಿಂದ ಮಾಡಿದ ಎರಡು ಅಡಿ ಎತ್ತರದ ಮರಗಾಲುಗಳನ್ನು ಕಾಲಿಗೆ ಕಟ್ಟಿಕೊಂಡಿರುತ್ತಾರೆ. ಕುದುರೆ ಆಕಾರದ ಕೀಲು

ಕುದುರೆಗಳಿಗೆ ಅದೇ ಅಳತೆಯ ಬಣ್ಣ ಬಣ್ಣದ ಗೌನನ್ನು ಹೊದಿಸಿರುತ್ತಾರೆ. ಕಲಾವಿದರು ಕುದುರೆಯ ಬೆನ್ನಿನ ಮಧ್ಯಭಾಗದಲ್ಲಿ ಮಾಡಿದ ಸಂದಿಯಲ್ಲಿ ಸೇರಿ ತಮ್ಮ ಹೆಗಲುಗಳಿಗೆ ಕುದುರೆಯ ದಬ್ಬೆಯ ದೇಹವನ್ನು ಬಿಗಿದು ಕೊಳ್ಳುತ್ತಾರೆ. ಕೈಯಲ್ಲಿ ಲಾಗಾಮು ಹಿಡಿದು ಕುದುರೆಯ ತಲೆ, ಬಾಲವನ್ನು ಹಿಂದಕ್ಕೆ ಮುಂದಕ್ಕೆ ಮೇಲಕ್ಕೆ ಕೆಳಕ್ಕೆ ಕುಣಿಸುತ್ತಾರೆ. ಬಾಗುವುದು, ಬಳುಕುವುದು ಹೆಣ್ಣು ಗಂಡು ಕುದುರೆಗಳು ಮುದ್ದಾಡುವುದು ಇತ್ಯಾದಿಗಳನ್ನು ನೋಡಿದಾಗ ನಿಜವಾದ ಕುದುರೆಗಳೇ ಕುಣಿಯುತ್ತಿರುವಂತೆ ಗೋಚರಿಸುತ್ತದೆ.

ಡೋಲು, ತಮಟೆ, ನಾಗಸ್ವರ ಮೊದಲಾದ ವಾದ್ಯಗಳು ಹಿಮ್ಮೇಳದೊಂದಿಗೆ ನಡೆಯು ಕುಣಿತ ಆಕರ್ಷಣೀಯವಾಗಿರುತ್ತದೆ.

ಬೆಳ್ಳೂರಿನಲ್ಲಿ ಕೀಲು ಕುದುರೆ ಕುಣಿಯುವ ಕಲಾವಿದರ ತಂಡವಿದೆ. ಇದು ದೇವರ ಉತ್ಸವ, ಗಣೇಶೋತ್ಸವ, ಸಾರ್ಜನಿಕ ಸಮಾರಂಭಗಳಲ್ಲಿ ಪ್ರದರ್ಶನ ನೀಡುತ್ತವೆ.

೪. <u>ಚಾಡಿಕೆಯವರು:-</u>

ಧಾರ್ಮಿಕ ಸಂಪದೆದಾಯಕ್ಕೆ ಸೇರಿದ ವಿಶಿಷ್ಟ ವೃತ್ತಿ ಗಾಯಕರಾದ ಚಾಡಿಕೆಯವರು ಎಲ್ಲಮ್ಮ ದೇವಿಯ ಭಕ್ತರು. ಚಾಡಿಕೆ ಪ್ರಕಾರವು ಸ್ತ್ರೀದೇವತೆಗೆ ಸಂಬಂಧಪಟ್ಟಿದ್ದು. ಈ ಸಂಪ್ರದಾಯದಲ್ಲಿ ಹೆಂಗಸರು, ಗಂಡಸರು ಇರುತ್ತಾರೆ. ಇವರೆಲ್ಲ ತಲೆಯ ಮೇಲೆ ಎಲ್ಲಮ್ಮನ ಮುಖವಾಡ ವಿರುವ ತಾಮ್ರದ ಕೊಡ ಹೊತ್ತಿರುತ್ತಾರೆ. ಈ ಕೊಡವೇ ಎಲ್ಲಮ್ಮ ದೇವಿಯ ಝುಗ. ಇವರನ್ನು ಎಲ್ಲಮ್ಮನ ಜೋತೇರು ಜೋಗಪ್ಪಗಳು ಎಂದು ಕರೆಯುತ್ತಾರೆ. ಬಿಳಿಯ ನಿಲವಂಗಿ ಮೇಲೆ ಕರಿಯ ಕೋಟು ಹಳದಿ ಬಣ್ಣದ ಕಾಸೆ ಪಂಚೆ, ಕೊರಳಿನಿಂದ ಎರಡೂ ಕಡೆ ಇಳಿಬಿಟ್ಟು ಧೋತರ, ಕಾಲಿಗೆ ಗಜ್ಜೆ, ಹಣೆಯಲ್ಲಿ ಎಲ್ಲಮ್ಮದೇವಿಯ ಭಂಡಾರದ ಬೊಟ್ಟು, ಕೊರಳಲ್ಲಿ ದರುಶನ ಮಣಿ ಧರಿಸಿರುತ್ತಾರೆ. ಜೋಗತಿಯರು ಕೆಂಪು ಬಳೆ ಹಣೆಯಲ್ಲಿ ಕುಂಕುಮ ಮತ್ತು ಭಂಡಾರ ಕಾಲಿಗೆ ಗಜ್ಜೆ ಕಟ್ಟಿರುತ್ತಾರೆ. ತಲೆಯ ಮೇಲೆ ಝುಗವನ್ನು ಹೊತ್ತ ಜೋಗತಿಯರು ಅದು ಕೆಳಗೆ ಬೀಳದಂತೆ ಸಂಗೀತಕ್ಕೆ ತಕ್ಕಂತೆ ಹೆಜ್ಜೆ ಹಾಕುತ್ತಾರೆ. ಇವರು ಬೆಳ್ಳೂರಿನ ಎಲ್ಲಮ್ಮ ದೇವಿಯ ಉತ್ಸವದಲ್ಲಿ ಪಾಲ್ಗೊಳುವ ನೃತ್ಯ ತಂಡವಾಗಿದೆ.

೫. ಮುಖವೀಣೆ:-

ಓಲಗದಾಕಾರದ ಪೀಪಿಯಂತಹ ಚಿಕ್ಕವಾದ್ಯಕ್ಕೆ ಮುಖವೀಣೆ ಎನ್ನುತ್ತಾರೆ. ಇದರಿಂದ ಸುಮಾರು ಮೂವತ್ತೆರಡು ರಾಗಗಳು ಹೊರಹೊಮುತ್ತವೆ. ಈ ವಾದ್ಯ ಸೂತ್ರದ ಗೊಂಬೆ ಪ್ರದರ್ಶನ ಯಕ್ಷಗಾನಕ್ಕೆ ಬಹುಮುಖ್ಯ. ಬೆಳ್ಳೂರಿಗೆ ಹತ್ತಿರದಲ್ಲಿರುವ ನರಗನಹಳ್ಳಿಯ ಮಾಯಣ್ಣನವರು ಮುಖವೀಣೆ ನುಡಿಸುವುದರಲ್ಲಿ ಖ್ಯಾತಿ ಪಡದಿದ್ದರು. ಈಗ ಬೆಳ್ಳೂರಿನಲ್ಲಿ ಪಾಪಣ್ಣ ಎಂಬುವರು ಪುಟ್ಟಸ್ವಾಮಾಚಾರ್ಯರ ಒತ್ತಾಸೆಯ ಮೇರೆಗೆ ಮುಖವೀಣೆ ನುಡಿಸುವುದನ್ನು ಕಲಿತರು. ಇವರೂ ಸಹ ಸೂತ್ರದ ಗೊಂಬೆ ಪ್ರದರ್ಶನದಲ್ಲಿ ದೇಶ ವಿದೇಶಗಳಲ್ಲಿ ಸಾಕಷ್ಟು ಪ್ರದರ್ಶನ ನೀಡಿದ್ದಾರೆ.

೬. ಭಾಗವಂತಿಕೆ:-

ಒಂದು ಕಾಲಕ್ಕೆ ಪಂಚ ವೈಷ್ಣವ ಗ್ರಾಮಗಳೆಂದು ಹೆಸರಾಗಿದ್ದ ಕಡಬ, ಮಾಯಸಂದ್ರ, ಬಿಂಡಿಗನವಿಲೆ, ನುಗ್ಗೆಹಳ್ಳಿ, ನೊಣವಿನಕೆರೆ ಗ್ರಾಮಗಳು ವೈಷ್ಣವ ಧರ್ಮದ ಪ್ರಸಾರ ಕೇಂದ್ರಗಳಾಗಿದ್ದವು. ಬೇಟೆರಾಯ, ಆಂಜನೇಯ, ಗರುಡ, ಕಾವೇಟಿರಂಗ, ನರಸಿಂಹಸ್ವಾಮಿ ಮೊದಲಾದ ಸ್ಥಳೀಯ ವೈಷ್ಣವ ದೈವಗಳನ್ನು ಮುಂದುವರಿಸಿ ಕೊಂಡು ಭಾಗವಂತಿಗೆ ಸಂಪ್ರದಾಯವು ಬೆಳೆದು ಬಂದಿರುತ್ತದೆ.

ಭಾಗವಂತಿಕೆ ಮೇಳವು ದೀವಳಿಗೆ ಸಂದರ್ಭದಲ್ಲಿ ಮಾತ್ರ ರೂಪುಗೊಳ್ಳುವ ಜನಪದ ಮೇಳ. ಮನೆಗೊಂದು ಆಳಿನಂತೆ ಬಂದು ಸೇರುವ ಈ ಮೇಳದಲ್ಲಿ ಸಾಮಾನ್ಯವಾಗಿ ಅರ್ಧದಷ್ಟು ಜನ ಪಟಾ ಕುಣಿತದ ಕಲಾವಿದರಿರುತ್ತಾರೆ. ಈ ಕುಣಿತದಲ್ಲಿ ಭಾಗವಹಿಸುವವರು ತಲೆಗೆ ರುಮಾಲು, ಕಚ್ಚೆ, ಪಂಚೆ, ಬಿಳಿಯ ಅಂಗಿ, ಅದರ ಮೇಲೆ ಕರಿಯ ಕೋಟು, ಹಣೆಯಲ್ಲಿ ನಾಮ, ಹೆಗಲಿಗೆ ಅಡ್ಡಲಾಗಿ ವಲ್ಲಿ ಧರಿಸಿ ಕಾಲಿಗೆ ಗೆಜ್ಜೆ ಕಟ್ಟಿರುತ್ತಾರೆ. ಇದರ ಮಧ್ಯದಲ್ಲಿ ಆಕರ್ಷಣೀಯ ವ್ಯಕ್ತಿ ಎಂದರೆ ಕೋಡಂಗಿ. ಕೋಡಂಗಿ ವೇಷದಾರಿ ಮಕ್ಕಳಿಗೆ ಭಯವನ್ನು ಉಂಟುಮಾಡುವಂತಿರುತ್ತಾನೆ. ರಾಮಾಯಾಣ, ಮಹಾಭಾರತ, ಭಾಗವತಗಳಿಂದ ಆರಿಸಿದ ಹಾಡುಗಳನ್ನು ಹಾಡುತ್ತಾರೆ. ಈಗಲೂ ಬೆಳ್ಳೂರಿನ ಸುತ್ತ ಮುತ್ತಲ ಗ್ರಾಮಗಳಾದ ಎಲೆಕೊಪ್ಪ, ಕನ್ನೇನಹಳ್ಳಿ, ಚೋಳೇನಹಳ್ಳಿ, ಕಂಬದಹಳ್ಳಿ, ಕರೀಜೀಹಳ್ಳಿ, ನಲ್ಕುಂದಿ, ಭೈರಸಂದ್ರ, ಬೆಟ್ಟದಕೋಟೆ, ಚೇಣ್ಯ ಗಳಲ್ಲಿ ಕಂಡು ಬರುತ್ತಾರೆ. ಕರೀಜೀರಹಳ್ಳಿ, ಎಲೆಕೊಪ್ಪದ ಭಾಗವತರು ಬೆಳ್ಳೂರಿಗೆ ಬಂದು

ಬೀದಿ ಬೀದಿಗಳಲ್ಲಿ ಭಾಗವಂತಿಕೆ ಮಾಡುತ್ತಾರೆ. ಇವರನ್ನು ಸಂತೋಷದಿಂದ ಸ್ವಾಗತಿಸಿ ಬೀಳ್ಕೊಡುತ್ತಾರೆ. ಭಾಗವಂತಿಕೆ ಮೇಳದಲ್ಲಿ ಉತ್ತಮ ಪ್ರದರ್ಶನ ನೀಡಿದ ಎಲೆಕೊಪ್ಪದ ಬಸವೇಗೌಡರಿಗೆ ರಾಜ್ಯ ಪ್ರಶಸ್ತಿ ಲಭಿಸಿದೆ.

೭. ತಮಟೆ ಕುಣಿತ:-

'ಒಲೆ ಇಲ್ಲದ ಮನೆಯಿಲ್ಲ ತಮಟೆ ಇಲ್ಲದ ಊರಿಲ್ಲ' ತಮಟೆಯ ಗ್ರಾಮೀಣ ಬದುಕಿನ ಸಾಂಸ್ಕೃತಿಕ ಲೋಕದ ವೈಶಿಷ್ಟ ಪೂರ್ಣ ವಾದ್ಯ. ಹುಟ್ಟಿನಿಂದ ಸಾಯುವವರೆಗೂ ಜರುಗುವ ಆಚರಣೆಗಳಲ್ಲಿ ಪ್ರಧಾನ ಪಾತ್ರವಹಿಸುತ್ತದೆ. ಜಾತ್ರೆ, ಉತ್ಸವ, ಕುಣಿತ, ಹಬ್ಬಹರಿದಿನ , ಆಟ, ಬಯಲಾಟ ಮದುವೆ, ಮೆರವಣಿಗೆ, ಮರಣ ಯಾವುದಕ್ಕೆ ಆಗಲಿ ತಮಟೆ ಇರಲೇಬೇಕು.

ತಮಟೆಯನ್ನು ತಯಾರಿಸುವುದು ತುಂಬಾ ಸರಳವಾದ ವಿಧಾನ. ವೃತ್ತಾಕಾರದ ಮರದ ಬಳೆಯೊಂದಕ್ಕೆ ಚನ್ನಾಗಿ ಹದಗೊಳಿಸಿ ಆಡಿನ ಅಥವಾ ದನದ ಚರ್ಮವನ್ನು ಚರ್ಮದ ಚಾರುಗಳಿಂದ ಬಿಗಿದು ಕಟ್ಟುತ್ತಾರೆ. ಹೆಗಲಿಗೆ ನೇತುಹಾಕಿಕೊಳ್ಳಲು ಹೆಗಲು ಪಟ್ಟಿಯನ್ನು ತಮಟೆಗೆ ಜೋಡಿಸುತ್ತಾರೆ. ತಮಟೆಯನ್ನು ನುಡುಸುವುದಕ್ಕೆ ಮೊದಲು ಬೆಂಕಿಯ ಉರಿಯಲ್ಲಿ ಹದವಾಗಿ ಕಾಯಿಸುತ್ತಾರೆ. ತಮಟೆ ಬಾರಿಸಲು ಒಂದು ತೆಳುವಾದ ಚಕ್ಕೆ ಕಡ್ಡಿ ಮತ್ತು ಒಂದು ದುಂಡಾದ ಕಡ್ಡಿಯನ್ನು ಬಳಸುತ್ತಾರೆ. ತಮಟೆಯನ್ನು ಎದೆಯ  ಎಡಬುಜಕ್ಕೆ ನೇತು  ಹಾಕಿಕೊಂಡು ಎಡಗಯಲ್ಲಿ ಚಕ್ಕೆ ಕಡ್ಡಿ. ಬಲಗೈಯಲ್ಲಿ ಒಂದಡಿ ಉದ್ದದ ದುಂಡಾದ ಕೋಲಿನಿಂದ ಬಾರಿಸುತ್ತಾರೆ.

ಈ ರೀತಿಯ ತಮಟೆ ಎಲ್ಲಾ ಭಾಗದಲ್ಲೂ ಹಾಣಸಿಗುವುದಿಲ್ಲ. ಕೋಲಾರ, ಮಂಡ್ಯ, ಮೈಸೂರು, ಬೆಂಗಳೂರು, ಹಾಸನ, ತುಮಕೂರು ಜಿಲ್ಲೆಗಳಲ್ಲಿ ಕಂಡು ಬರುತ್ತದೆ. ತಮಟೆಗಳೊಂದಿಗೆ ದೋಣು, ನಗಾರಿ, ಹರೆ, ತಾಸೆ, ಕುಣಿಮಿಣಿ ಗಳು ಸೇರಿಕೊಳ್ಳುತ್ತವೆ.

ಯಾವುದೇ ಕುಣಿತಕ್ಕೆ ತಮಟೆ ಕಡ್ಡಾಯ. ಅದರಲ್ಲೂ ಬೆಳ್ಳೂರಿನಲ್ಲಿ ಗಣೇಶೋತ್ಸವದಂದು ತಮಟೆಯ ನಾದವನ್ನು ಕೇಳಲು ಜನ ಕಿಕ್ಕಿರಿದಿರುತ್ತಾರೆ. ತಮಟೆ ಬಾರಿಸುತ್ತಾ ನೆಲದ ಮೇಲಿನಿಂದ ನೋಟು, ನಾಣ್ಯ, ಸೂಜಿ ಇತ್ಯಾದಿಗಳನ್ನು ಕಣ್ಣುರೆಪ್ಪೆಯಿಂದ ಮೇಲೆತ್ತುವ ಚಮತ್ಕಾರವನ್ನು ಪ್ರದರ್ಶಿಸುತ್ತಾರೆ.

ರಂಗಕುಣಿತ ಸೋಮನ ಕುಣಿತಕ್ಕೆ ತಮಟೆ ಬಹಳ ಮುಖ್ಯ. ಇದರ ಜೊತೆಯಲ್ಲಿ ಹರೆ. ದೋಣು, ಓಲಗ, ಮುಖವೀಣೆ ವಾದ್ಯಗಳು ಸೇರಿದಾಗ ಜನರ ಮನಸ್ಸಿನಲ್ಲಿ ಚಂಚಲ ಉಂಟಾಗುವಂತೆ ಮಾಡುತ್ತವೆ. ಈ ಹಬ್ಬಕ್ಕೆ ಜನರೇ ಕುಣಿತ ಪ್ರಾರಂಬಿಸುವ ಮಟ್ಟಿಗೆ ಈ ವಾದ್ಯ ಪ್ರದರ್ಶನಗೊಳ್ಳುತ್ತದೆ. ಇಲ್ಲಿನ ಅನೇಕ ಕಾರ್ಯಕ್ರಮಗಳಲ್ಲಿ ದಸರ ಉತ್ಸವದಲ್ಲಿ ಪಾಲ್ಗೊಂಡ ತಮಟೆವಾದ್ಯ ಪ್ರದರ್ಶಿಸುತ್ತಾರೆ.

## ಅಧ್ಯಾಯ - ೮

## ಉಪಸಂಹಾರ

ಬೆಳ್ಳೂರು ಸಂಸ್ಕೃತಿಯನ್ನು ಕುರಿತು ತಿಳಿಸಲಾಗಿದೆ ಭೌಗೋಳಿಕ ಪರಿಸರವು ಅಲ್ಲಿನ ಸಂಸ್ಕೃತಿಯನ್ನು ...ಪಿಸುವಲ್ಲಿ ವಹಿಸಿರುವ ಪಾತ್ರವನ್ನು ವಿವರಿಸಲಾಗಿದೆ. ಬೆಳ್ಳೂರಿನ ಪ್ರಾಚೀನ ಪರಂಪರೆಯನ್ನು ಗ್ರಹಿಸುವುದಕ್ಕಾಗಿ ...ತಿಹಾಸಿಕವಾಗಿ ಲಭ್ಯವಿದ್ದು ಶಾಸನಗಳು ವಿರಗಲ್ಲುಗಳು, ಮಾಸ್ತಿಕಲ್ಲುಗಳ ವಿವರಗಳೊಂದಿಗೆ ಪ್ರಾದೇಶಿಕವಾಗಿ ...ವುಗಳ ಲಕ್ಷಣಗಳನ್ನು ಗಮನಿಸಿ ಸಾಂಸ್ಕೃತಿಕ ವಿವರಗಳನ್ನು ವಿಷದಪಡಿಸಲಾಗಿದೆ ಪೆರಮಾಲ ದಂಡನಾಯಕನ ...ಜಕೀಯ, ಸಾಮಾಜಿಕ ಆರ್ಥಿಕ ದಾರ್ಮಿಕ ಆಡಳಿತವನ್ನು ತಿಳಿಸಲಾಗಿದೆ. ಇವರ ಕಾಲದಲ್ಲಿ ನಿರ್ಮಾಣಗೊಂಡಿರವ ...ವಾಲಯಗಳು ಕೆರೆಕಟ್ಟೆಗಳು, ಕಾಲುವೆಗಳು ಜನಪರ ಕಾರ್ಯಗಳು ನಿರೂಪಿಸಲಾಗಿದೆ. ಜನಪದರ ಕಲ್ಪನೆ, ...ಂಜಿಕೆ ಆಚರಣೆ ಸಂಪ್ರದಾಯ ಭಾಷೆ ಸಾಹಿತ್ಯ ಕಲೆ ಮುಂತಾಗಿ ವಿವಿದ ನೆಲೆಗಳನ್ನು ಜನಪದ ಸಂಸ್ಕೃತಿಯನ್ನು ...ಧ್ಯವಾದಷ್ಟು ವಿವರವಾಗಿಯೇ ಕ್ಷೇತ್ರಕಾರ್ಯವನ್ನಾಧರಿಸಿ ಅಧ್ಯನಕ್ಕೊಳಪಡಿಸಲಾಗಿದೆ. ಇಷ್ಟಾದರೂ ಸಂಸ್ಕೃತಿ ...ೋಧದಲ್ಲಿ ಪರಿಪೂರ್ಣತೆಯೆಂಬುದಾಗಲಿ ಅಥವಾ ಪರಿಸಮಾಪ್ತಿಯೆಂಬುದಾಗಲಿ ಇಲ್ಲವೆಂಬುದೆ ನನ್ನ ತಿಳುವಳಿಕೆ

ಜನಪದರು ಇತ್ತೀಚೆಗೆ ಕೃಷಿ ಮತ್ತು ಕುಲಕಸುಬುಗಳನ್ನಾಧರಿಸಿದ ಸಂಸ್ಕೃತಿಗೆ ಪರ್ಯಾಯವಾಗಿ ...ಗಾಗರಿಕೆ ಮತ್ತು ವ್ಯಾಪಾರಿ ಸಂಸ್ಕೃತಿಗಳು ಪ್ರವೇಶ ಪಡೆದು ಹಲವಾರು ದ್ವಿತಿಯ ಸಾಂಸ್ಕೃತಿಕ ವೈವಿಧ್ಯತೆಗಳಿಗೆ ...ರಣವಾಗಿರುವುದನ್ನು ತಿಳಿಸಲಾಗಿದೆ.

ಬೆಳ್ಳೂರಿಗೆ ಸಮೀಪದಲ್ಲಿರುವ ಆದಿಚುಂಚನಗಿರಿ ಕ್ಷೇತ್ರದ ಪ್ರಭಾವ ಈ ಊರಿನ ಮೇಲೆ ಸಾಕಷ್ಟು ...ಭಾವಬಿರಿದೆ ಈ ಕ್ಷೇತ್ರದವರು ನಡೆಸುತ್ತಿರುವ ಶಿಕ್ಷಣ ಸಂಸ್ಥೆಗಳಲ್ಲಿ ವಿದ್ಯಾಭ್ಯಾಸ್ ಪಡೆದು ವಿವಿದ ಇಲಾಖೆಗಳಲ್ಲಿ ...ನ್ನತ ಸ್ಥಾನವನ್ನು ಅಲಂಕರಿಸಿದ್ದಾರೆ. ಈ ಊರು ಇತ್ತೀಚಿಗೆ ವ್ಯಾಪಾರ ವಹಿವಾಟಿನಲ್ಲಿ ಹೆಚ್ಚು ಅಭಿವೃದ್ಧಿಯನ್ನು ...ಾಧಿಸುತ್ತಿದೆ.

ಗ್ರಂಥಸ್ಥವಾಗಿ ಹೇಳಬೇಕೆಂದರೆ ಕನ್ನಡದ ಕಣ್ವ ಬಿ.ಎಂ.ಶ್ರೀ ಯವರು ಹುಟ್ಟೂರಾದ ಬೆಳ್ಳೂರು ಕನ್ನಡ ...ತಿಹಾಸದಲ್ಲಿ ಹೆಸರು ಮಾಡಿದೆ. ಇವರ ಬ್ಯಾಲಜೀವನ ವಿಧ್ಯಾಭ್ಯಾಸ, ಕೃತಿರಚನೆ ಪಡೆದ ಪ್ರಶಸ್ತಿಗಳನ್ನು ತಿಳಿಸಲಾಗಿದೆ.

ಈ ಊರಿನ ಗ್ರಾಮದೇವತೆಗಳು, ಹಬ್ಬಗಳು, ಜಾತ್ರೆಗಳು ನಡೆಯುವ ಉದ್ದೇಶ, ಆಚರಣೆಯನ್ನು ...ಧ್ಯವಾದಷ್ಟು ತಿಳಿಸಲಾಗಿದೆ.

ಪ್ರದರ್ಶನ ಕಲೆಗಳಲ್ಲಿ ಈ ಊರು ಸಾಕಷ್ಟು ಹೆಸರು ಮಾಡಿದೆ. ಸಂಗೀತಕ್ಕೆ ಹೆಸರಾದ ಬೆಳ್ಳೂರು ...ೋದರಿಯರು ಪರಿಚಯ, ಸೂತ್ರದ ಗೊಂಬೆಯಾಟದಲ್ಲಿ ದೇಶವಿದೇಶಗಳಲ್ಲಿ ಪ್ರದರ್ಶನ ನೀಡಿರುವ ವಿವರವನ್ನು ...ಡಲಾಗಿದೆ. ಜನಪದ ನೃತ್ಯಗಳಾದ ರಂಗದ ಕುಣಿತ, ಸೋಮನ ಕುಣಿತ, ತೊಗಲುಗೊಂಬೆಯಾಟ, ಚಾಡಿಕೆ ...ಣಿತ, ಮೊದಲಾದ ಪ್ರದರ್ಶನ ಕಲೆಗಳಿಗೆ ಸಂಬಂದಪಟ್ಟಂತೆ ಅಲ್ಪ ಸಲ್ಪ ಪ್ರಮಾಣದಲ್ಲಿ ವಿಷಯನವನ್ನು ...ಂಗ್ರಹಿಸಲಾಗಿದೆ.

ಗ್ರಂಥ ಸೂಚಿ (ಪರಾಮರ್ಶನ ಗ್ರಂಥಗಳು)


1. ಡಾ|| ಚಿದಾನಂದ ಮೂರ್ತಿ ಎಂ - ಕ.ಶಾ.ಸಾ.ಅ
2. ಡಾ|| ರಹಮತ್ ತರೀಕೆರೆ - ಕ.ಸಾ.ಅ
3. ಸಂಸ್ಕೃತಿಯ ಅಂತರ್ ಶಿಸ್ತೀಯ ನೆಲೆಗಳು - ಡಾ|| ಕೆ.ಕೃಷ್ಣಪ್ಪ
4. ದೇವುಡು ನರಸಿಂಹಶಾಸ್ತ್ರಿ - ಕರ್ನಾಟಕ ಸಂಸ್ಕೃತಿ
5. ಡಾ|| ಜೀ.ಶಂ ಪರಮಶಿವಯ್ಯ, ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು
6. ಡಿ.ವಿ. ಗುಂಡಪ್ಪ - ಸಂಸ್ಕೃತಿ
7. ಚಂದ್ರು ಕಾಳೇನಹಳ್ಳಿ - ಸೋಲಿಗರ ಸಂಸ್ಕೃತಿ
8. ನಾಗಮಂಗಲ - ಡಾ|| ಸಿ. ಮಹದೇವ್
9. ನಾಗಮಂಗಲ ತಾಲ್ಲೂಕು ದರ್ಶನ - ಮಹಮ್ಮದ್ ಕಲೀಂಉಲ್ಲ
10. ಜನಪದ ಕಲಾ ಪ್ರವೇಶ - ಡಾ|| ಚಕ್ಕರೆ ಶಿವಶಂಕರ್
11. ಕರ್ನಾಟಕ ಜಾತ್ರೆಗಳು - ಸಿ.ಎಸ್. ಶಿವಕುಮಾರಸ್ವಾಮಿ
12. ಜಾನಪದ ಕ್ಷೇತ್ರಕಾರ್ಯದ ಹಾದಿಯಲ್ಲಿ - ಕ್ಯಾತನಹಳ್ಳಿ ರಾಮಣ್ಣ
13. ಗ್ರಾಮದೇವತೆಗಳು - ಡಾ|| ಸಿದ್ದಲಿಂಗಯ್ಯ
14. ಎಪಿಗ್ರಾಪಿಯಾ ಕರ್ನಾಟಕ - 7
15. ಡಾ|| ಹೋ.ಶ್ರೀ ಸಮಗ್ರ ಸಾಹಿತಗಯ - ಪ್ರೊ. ಮಲ್ಲೇಶ್ವರಂ ಜಿ ವೆಂಕಟೇಶ್
16. ಮಾಹಿತಿ ನೀಡಿದವರು.
    1. ಸಿ.ಸೋಮಣ್ಣ ಬೆಳ್ಳೂರು
    2. ಅಬ್ದುಲ್ ಅಲೀಂ ಬೆಳ್ಳೂರು
    3. ಗುರುಮೂರ್ತಿ ಬೆಳ್ಳೂರು
    4. ಶ್ರೀ ಶೈಲೇಂದ್ರಪ್ಪ ಬೆಳ್ಳೂರು
    5. ಚಂದ್ರಣ್ಣ ಬೆಳ್ಳೂರು
    6. ಅಂಕಿ ಅಂಶ ಗ್ರಾಮ ಪಂಚಾಯಿತಿ ಬೆಳ್ಳೂರು



ದಿ ಮಾಧವರಾಯಸ್ವಾಮಿ
ದೇವಾಲಯ



ಶ್ರೀ ಆದಿ ಮಾಧವರಾಯಸ್ವಾಮಿ
ದೇವಾಲಯದ ಒಳಭಾಗದಲ್ಲಿರುವ ಶಾಸನ



ು ಮಾಧವರಾಯಸ್ವಾಮಿ ದೇವಾಲಯ ಹೊರ ನೋಟ



ಬಿ.ಎಂ.ಶ್ರೀ ಭವನ



ಲ ಸಿಂಧೇಶ್ವರ ದೇವಾಲಯ ಹೋರ ನೋಟ



ಶ್ರೀ ಮೂಲ ಸಿಂಧೇಶ್ವರ ದೇವಾಲಯ
ಮೇಲ್ಭಾಗದಲ್ಲಿರು ಸಳ ವಿಗ್ರಹ



ಶ್ರೀ ಮೂಲ ಸಿಂಧೇಶ್ವರ ದೇವಾಲಯ
ಪಕ್ಕದಲ್ಲಿರುವ ಗೌರಿಕೊಳ



ಶ್ರೀ ಯಲ್ಲಮ್ಮ, ಚಿಕ್ಕಮ್ಮ, ದೊಡ್ಡಮ್ಮ ದೇವಾಲಯ



ಶ್ರೀ ಕಲ್ಲೇಶ್ವರ ದೇವಾಲಯ



ವೀರ ವೈಷ್ಣವ ನದಿ



ಶ್ರೀ ಮೂಲ ಸಿಂಧೇಶ್ವರ ದೇವಾಲಯ
ಬಳಿಯಿರುವ ಕೋಟೆಯ ಕಲ್ಲುಗಳ ಅವಶೇಷಗಳು



ಮಸೀದಿ